# ಚಳ್ಳಕೆರೆ ಕಸಬಾ ಹೋಬಳಿಯ ಇತಿಹಾಸ ಮತ್ತು ಪುರಾತತ್ತ್ವ

(ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗಕ್ಕೆ ಸಾದರಪಡಿಸುತ್ತಿರುವ ಎಂ.ಫಿಲ್. ಪ್ರಬಂಧ)


ಸಂಶೋಧಕರು

ತಿರುಮಲ ಆರ್.

ನೋಂದಣಿ ಸಂಖ್ಯೆ: ೧೭೦೧೦೮೩೩೦೦೦೬

ಮಾರ್ಗದರ್ಶಕರು

ಡಾ.ಸಿ. ಮಹದೇವ

ಪ್ರಾಧ್ಯಾಪಕರು





ಮಾನವಿಕ ವಿಜ್ಞಾನಗಳ ನಿಕಾಯ

ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ–೫೮೩ ೨೭೬

೨೦೧೭-೧೮

# ಚಳ್ಳಕೆರೆ ಕಸಬಾ ಹೋಬಳಿಯ ಇತಿಹಾಸ ಮತ್ತು ಪುರಾತತ್ವ

(ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಾದರಪಡಿಸುತ್ತಿರುವ ಎಂ.ಫಿಲ್. ಪ್ರೌಢಪ್ರಬಂಧ)



ಸಂಶೋಧಕರು
**ತಿರುಮಲ ಆರ್.**
**ನೋಂದಣಿ ಸಂಖ್ಯೆ: ೧೭೦೧೦೮೦೩೦೦೦೬**

ಮಾರ್ಗದರ್ಶಕರು
**ಡಾ.ಸಿ. ಮಹದೇವ**
ಪ್ರಾಧ್ಯಾಪಕರು



ಸಮಾಜ ವಿಜ್ಞಾನಗಳ ನಿಕಾಯ
**ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ-೫೮೩ ೨೭೬
೨೦೧೭-೧೮

# ಮಾರ್ಗದರ್ಶಕರ ದೃಢೀಕರಣ ಪತ್ರ

**ತಿರುಮಲ ಆರ್.** ಅವರು **"ಚಳ್ಳಕೆರೆ ಕಸಬಾ ಹೋಬಳಿಯ ಇತಿಹಾಸ ಮತ್ತು ಪುರಾತತ್ವ"** ಎಂಬ ಶೀರ್ಷಿಕೆಯ ಪ್ರೌಢಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಪ್ರೌಢಪ್ರಬಂಧವನ್ನು ಸಲ್ಲಿಸಿರುತ್ತಾರೆ. ಪ್ರಸ್ತುತ ಅಧ್ಯಯನದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

**(ಡಾ.ಸಿ. ಮಹದೇವ)**
ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ : ೨೮/೦೮/೨೦೧೮
ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಪ್ರಮಾಣ ಪತ್ರ

**"ಚಳ್ಳಕೆರೆ ಕಸಬಾ ಹೋಬಳಿಯ ಇತಿಹಾಸ ಮತ್ತು ಪುರಾತತ್ವ"** ಎಂಬ ಶೀರ್ಷಿಕೆಯ ಈ ಪ್ರೌಢಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ ಡಾ.ಸಿ. ಮಹದೇವ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಈ ಪ್ರೌಢಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಅಧ್ಯಯನದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

Thirumala.R

**(ತಿರುಮಲ ಆರ್.)**


ಸಂಶೋಧನ ವಿದ್ಯಾರ್ಥಿ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ

ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ–೫೮೩ ೨೭೬


ದಿನಾಂಕ : 28/08/2018

ಸ್ಥಳ : ವಿದ್ಯಾರಣ್ಯ

# ಪರಿವಿಡಿ

# ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಾನ, ಮಹತ್ವ ಮತ್ತು ಸಮೀಕ್ಷೆ

## ಪ್ರಸ್ತಾವನೆ

ಕರ್ನಾಟಕದ ಭೌಗೋಳಿಕ ಪರಿಸರವು ವೈವಿಧ್ಯತೆಯಿಂದ ಕೂಡಿದ್ದು, ಇದರಲ್ಲಿ ವಿಶೇಷವಾದ ಕರ್ನಾಟಕ ಚರಿತ್ರೆಯಲ್ಲಿ ಚಿತ್ರದುರ್ಗ ಜಿಲ್ಲೆಗೆ ವಿಶಿಷ್ಟ ಸ್ಥಾನವಿದೆ. ಚಿತ್ರದುರ್ಗ ನೈಸರ್ಗಿಕ ಸಂಪತ್ತಿನೊಂದಿಗೆ ಆಯಾ ಪರಿಸರದ ಪ್ರಭಾವಕ್ಕೆ ಒಳಗಾಗಿ ಮಾನವ ಹೇಗೆ ಅನಾಗರಿಕತೆಯಿಂದ ನಾಗರಿಕತೆಯ ವಿವಿಧ ಹಂತಗಳನ್ನು ತಲುಪಿದನು ಎಂಬ ಅಂಶವು ಪುರಾತತ್ವ ಶೋಧನೆ ಮತ್ತು ಇತಿಹಾಸ ಅಧ್ಯಯನದಿಂದ ತಿಳಿದುಬರುತ್ತದೆ. ಇತಿಹಾಸಪೂರ್ವ ಕಾಲದ ಮಾನವನ ಜೀವನಕ್ರಮವನ್ನು ತಿಳಿಯಲು ನಮಗೆ ಆಕರಗಳ ಅಭಾವವಿದ್ದಿತ್ತು.

ಮೊದಲು ಆದಿಮಾನವನು ಅಲೆಮಾರಿಯಾಗಿ ಬೆಟ್ಟಗುಡ್ಡಗಳು, ಗವಿ, ಕಲ್ಲಾಸರೆ, ನದಿ, ಕಣಿವೆ ಮತ್ತು ಸರೋವರಗಳ ಸಮೀಪದಲ್ಲಿ ವಾಸಿಸುತ್ತಿದ್ದು, ನಂತರದ ದಿನಗಳಲ್ಲಿ ಆದಿಮಾನವನು ಒಂದೆಡೆ ಸ್ಥಿರವಾಗಿ ನೆಲೆ ನಿಲ್ಲಲು ಸಹಸ್ರಾರು ವರ್ಷಗಳು ಸಂದಿವೆ. ಆದಿಮಾನವನು ಆಹಾರ ಅನ್ವೇಷಣೆಯನ್ನು ಮೈಗೂಡಿಸಿಕೊಂಡು ಅಲ್ಲಿ ಸಿಗುತ್ತಿದ್ದಂತಹ ಗೆಡ್ಡೆ ಗೆಣಸುಗಳು, ಹಣ್ಣು ಹಂಪಲುಗಳನ್ನು ಹಾಗೂ ಪ್ರಾಣಿಗಳ ಹಸಿಮಾಂಸವನ್ನು ತಿನ್ನಲು ಪ್ರಾರಂಭಿಸಿದ. ಇದರಿಂದ ಪ್ರಾಣಿಗಳನ್ನು ಬೇಟೆಯಾಡುವ ಕಲೆಯನ್ನು ಕಲಿತುಕೊಂಡು ಮುಂದೆ ಹಂತ ಹಂತವಾಗಿ ಪಶುಸಂಗೋಪನೆಯ ಕೃಷಿಯನ್ನು ರೂಢಿಸಿಕೊಂಡನು.

ಇಂತಹ ಸಂದರ್ಭದಲ್ಲಿ ಮಾನವನು ತನಗೆ ಅವಶ್ಯಕತೆ ಇದ್ದ ವಸ್ತುಗಳನ್ನು ಸ್ವತಃ ತಾನೇ ತಯಾರಿಸಿಕೊಂಡು ಉಪಯೋಗಿಸತೊಡಗಿದ. ಇಂತಹ ಬಳಕೆಯ ವಸ್ತುಗಳಾದ ಶಿಲಾಯುಧಗಳು, ಮಡಿಕೆ-ಕುಡಿಕೆ, ಗೀರು, ಚಿತ್ರಗಳು, ರೇಖಾಚಿತ್ರಗಳನ್ನು ಅನ್ವೇಷಿಸಿ ಉತ್ಖನನ ಮಾಡುವುದರ ಮೂಲಕ ಅಲ್ಲಿ ದೊರೆತ ಹಲವು ಸಾಮಗ್ರಿಗಳ ಅವಶೇಷ ಪುರಾತತ್ವ ಆಕರಗಳಾಗಿ ಅಧ್ಯಯನಕ್ಕೆ

ಪೂರಕವಾಗಿವೆ. ಈ ಅವಶೇಷಗಳನ್ನು ಅನ್ವೇಷಿಸಿ ಬೆಳಕಿಗೆ ತಂದು ಇತಿಹಾಸವನ್ನು ಪುನರ್ರಚಿಸಲಾಗುತ್ತದೆ. ಇತಿಹಾಸ ಕಾಲಘಟ್ಟಕ್ಕಿಂತ ಬಹಳ ಹಿಂದೆಯೇ ಮಾನವ ಅಸ್ತಿತ್ವವಿದ್ದುದ್ದು ಪುರಾತತ್ವ ಅಧ್ಯಯನದಿಂದ ತಿಳಿಯಬಹುದು.

ಭಾರತದಲ್ಲಿ ಪುರಾತತ್ವಶಾಸ್ತ್ರದ ಮೇಲೆ ವೈಜ್ಞಾನಿಕ ಬೆಳಕು ಬಿದ್ದದ್ದು ಸರ್ ಮಾರ್ಟಿಮರ್ ವ್ಹೀಲರ್ ಅವರು ಪುರಾತತ್ವ ಇಲಾಖೆಯಲ್ಲಿ ನಿರ್ದೇಶಕರಾಗಿದ್ದ ಕ್ರಿ.ಶ. ೧೯೪೪-೪೮ರ ಅವಧಿಯಲ್ಲಿ. ಈತ ರೂಪಿಸಿದ ತರಬೇತಿ ಶಾಲೆ ಹಲವು ಶ್ರೇಷ್ಠ ಪುರಾತತ್ವಶಾಸ್ತ್ರಜ್ಞರನ್ನು ರೂಪಿಸಲು ಪ್ರಥಮ ಮೆಟ್ಟಿಲು ಆಯಿತು. ಒಟ್ಟಿನಲ್ಲಿ ಭಾರತದಲ್ಲಿ ಪ್ರಾಚ್ಯವಸ್ತುಗಳ ಬಗ್ಗೆ ನಿಜವಾದ ಆಸಕ್ತಿ ಪ್ರಾರಂಭವಾದದ್ದು ಪಾಶ್ಚಾತ್ಯರ ಆಗಮನದ ನಂತರವೆ.

ಕರ್ನಾಟಕದ ಉದ್ದಗಲಕ್ಕೂ ಯಾವುದೇ ಹಳ್ಳಿಗೆ ಭೇಟಿ ನೀಡಿದರೂ ಒಂದಲ್ಲ ಒಂದು ಸ್ಮಾರಕದ ಅವಶೇಷಗಳು ಕಂಡುಬರುತ್ತವೆ. ಇಂತಹ ಅವಶೇಷಗಳು ಆಧುನಿಕತೆಯ ಪ್ರಭಾವದಿಂದ ನಿರ್ಲಕ್ಷ್ಯಕ್ಕೆ ಒಳಗಾಗಿದ್ದು ಇನ್ನೂ ಕೆಲವು ಪ್ರಾಕೃತಿಕ ವಿಕೋಪಕ್ಕೆ ಸಿಲುಕಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವ ಸ್ಥಿತಿಯಲ್ಲಿದ್ದು ಅಳಿವಿನ ಅಂಚಿನಲ್ಲಿವೆ. ಪ್ರಮುಖ ಸ್ಮಾರಕ ಅವಶೇಷಗಳಾದ ದೇವಾಲಯಗಳು, ಮೂರ್ತಿಶಿಲ್ಪಗಳು, ನಾಣ್ಯಗಳು, ಕೆರೆ ಕಟ್ಟೆಗಳು, ಕೋಟೆ-ಕೊತ್ತಲಗಳು ಹಾಗೂ ಆದಿಮಾನವನ ವಸತಿ ನೆಲೆಗಳನ್ನು ರಕ್ಷಣೆ ಮಾಡಬೇಕಾಗಿದ್ದು ಒಂದಕ್ಕೊಂದು ಸಂಬಂಧ ಕಲ್ಪಿಸಬೇಕಾಗಿದೆ. ಆದರೆ ಇಲ್ಲಿ ವಾಸಿಸಿದ ಸಾಮಾನ್ಯ ಜನರ ಸಾಂಸ್ಕೃತಿಕ ಇತಿಹಾಸವನ್ನು ರಚಿಸುವ ಕಡೆಗೆ ಅಧ್ಯಯನವನ್ನು ವಿಸ್ತಾರಗೊಳಿಸಬೇಕಾಗಿರುವುದು ಪ್ರಸ್ತುತ ಅವಶ್ಯಕವಾಗಿದೆ. ಹಾಗಾಗಿ ಚಳ್ಳಕೆರೆ ಕಸಬಾ ಹೋಬಳಿ ಕೂಡ ಅನೇಕ ವೈಶಿಷ್ಟ್ಯಗಳಿಂದ ಕೂಡಿದೆ. ಕಸಬಾ ಹೋಬಳಿ ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡುವ ಸಲುವಾಗಿ "ಚಳ್ಳಕೆರೆ ಕಸಬಾ ಹೋಬಳಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ" ಎಂಬ ಶೀರ್ಷಿಕೆಯ ಅಡಿಯಲ್ಲಿ ಸ್ಥಳೀಯವಾಗಿ ಲಭ್ಯವಿರುವ ಸಾಹಿತ್ಯಿಕ ಪುರಾತತ್ವ ಆಕರಗಳು ಹಾಗೂ ಮೌಖಿಕ ಆಕರಗಳನ್ನು ಕಲೆಹಾಕಿ ಸ್ಥಳೀಯ ಚರಿತ್ರೆ ಕಟ್ಟಿಕೊಡುವುದು ಪ್ರಸ್ತುತ ಅಧ್ಯಯನದ ಅವಶ್ಯಕತೆಯಾಗಿದೆ.

## ಅಧ್ಯಯನದ ವ್ಯಾಪ್ತಿ

ಯಾವುದೇ ಒಂದು ಸಂಶೋಧನೆಗೆ ಚೌಕಟ್ಟು ಬಹಳ ಮುಖ್ಯ. ಅದರಂತೆಯೇ ಒಂದು ಅಧ್ಯಯನಕ್ಕೆ ವ್ಯಾಪ್ತಿ ಇರಬೇಕು. ಈ ಮಿತಿಯಲ್ಲಿ ಅಧ್ಯಯನ ಕೈಗೊಂಡಾಗ ಮಾತ್ರ ಪರಿಪೂರ್ಣವಾಗುತ್ತದೆ. ಈ ಚೌಕಟ್ಟಿನ ಕ್ರಮಬದ್ಧತೆಯಿಂದಾಗಿ ಸ್ಪಷ್ಟವಾದ ಇತಿಹಾಸವನ್ನು ರಚಿಸಲು ಸಾಧ್ಯವಾಗುತ್ತದೆ.

ಅಧ್ಯಯನದ ಶೀರ್ಷಿಕೆಯೇ ಸೂಚಿಸುವಂತೆ 'ಚಳ್ಳಕೆರೆ ಕಸಬಾ ಹೋಬಳಿಯ ಅಧ್ಯಯನ'ದ ವ್ಯಾಪ್ತಿಯನ್ನು ಭೌಗೋಳಿಕ ವಿಸ್ತಾರ ಮತ್ತು ಕಾಲಾವಧಿಯ ಹಿನ್ನೆಲೆಯಲ್ಲಿ ನಿರ್ದಿಷ್ಟಪಡಿಸಿಕೊಳ್ಳಲಾಗಿದೆ. ಪ್ರಾಗೈತಿಹಾಸಿಕ ಕಾಲದಿಂದ ಪಾಳೆಯಗಾರರ ಆಡಳಿತಾವಧಿಯವರೆಗೂ ಅಧ್ಯಯನ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಳ್ಳಲಾಗಿದೆ.

## ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶ ಈ ಪರಿಸರದ ಒಟ್ಟಾರೆ ಇತಿಹಾಸ ಮತ್ತು ಪುರಾತತ್ವವನ್ನು ವ್ಯವಸ್ಥಿತವಾಗಿ ಕಟ್ಟಿಕೊಡುವ ಹಾಗೂ ಲಭ್ಯವಿರುವ ಆಧಾರಗಳ ಹಿನ್ನೆಲೆಯಲ್ಲಿ ಮರು ವಿಮರ್ಶಿಸುವುದಾಗಿದೆ. ಈ ವಿಷಯಕ್ಕೆ ಪೂರಕವಾಗಿ ಈ ಪರಿಸರದಲ್ಲಿ ದೊರೆಯುವ ಪುರಾತತ್ವ ಆಕರಗಳನ್ನು ಸಂಗ್ರಹಿಸುವ ಹಾಗೂ ವಿಶ್ಲೇಷಣೆಯ ಮೂಲಕ ಸ್ಥಳೀಯ ಚರಿತ್ರೆ ಕಟ್ಟಿಕೊಡಲು ಪ್ರಯತ್ನಿಸಲಾಗುವುದು.

ಕರ್ನಾಟಕ ಇತಿಹಾಸದಲ್ಲಿ ಚಿತ್ರದುರ್ಗ ಜಿಲ್ಲೆಯು ಐತಿಹಾಸಿಕ ಮಹತ್ವವನ್ನು ಪಡೆದಿದೆ. ಈ ಜಿಲ್ಲೆಯ ಮಧ್ಯಭಾಗದಲ್ಲಿರುವ ಚಳ್ಳಕೆರೆಯ ಕಸಬಾ ಹೋಬಳಿಯು ಪ್ರಾಗಿತಿಹಾಸ ಕಾಲದಿಂದಲೂ ಜನವಸತಿಯ ನೆಲೆಯಾಗಿದ್ದು ಇದಕ್ಕೆ ಪುರಾವೆಯಾಗಿ ಇಲ್ಲಿ ಹಲವು ಪ್ರಾಚ್ಯಾವಶೇಷಗಳು ದೊರೆತಿವೆ. ಈ ಹಿನ್ನೆಲೆಯಲ್ಲಿ ಮತ್ತೆ ಹೊಸ ಹೊಸ ಪ್ರಾಗಿತಿಹಾಸ ನೆಲೆಗಳ ಶೋಧನಾ ಕಾರ್ಯವನ್ನು ಕೈಗೊಳ್ಳಲಾಗುವುದು.

ಕಸಬಾ ಹೋಬಳಿಯ ಪರಿಸರವು ಭೌಗೋಳಿಕವಾಗಿ ವಿಶಿಷ್ಟವಾಗಿದೆ. ಈ ಭೌಗೋಳಿಕ ಅಂಶಗಳು ಇಲ್ಲಿನ ಪ್ರಾಗಿತಿಹಾಸ ನೆಲೆಗಳ ಮೇಲೆ ಬೀರಿರುವ ಪ್ರಭಾವವನ್ನು ವಿವರವಾಗಿ ಚರ್ಚಿಸಲಾಗುವುದು. ಈ ಪರಿಸರದಲ್ಲಿ ಸೂಕ್ಷ್ಮ ಶಿಲಾಯುಗದಿಂದ ಬೃಹತ್ ಶಿಲಾಯುಗ ಕಾಲದ ಅವಶೇಷಗಳು ಬೆಳಕಿಗೆ ತರುವುದರ ಮೂಲಕ ದೊಡ್ಡೇರಿ, ಚಿಕ್ಕ ಮಧುರೆ ಇಲ್ಲಿನ ಪ್ರಾಚೀನ ಮಾನವನ ಸಂಸ್ಕೃತಿಯನ್ನು ಕುರಿತು ವಿವರಿಸಲಾಗುವುದು. ಒಟ್ಟಾರೆ ಇಲ್ಲಿನ ಪುರಾತತ್ವೀಯ, ಸಾಹಿತ್ಯಿಕ ಹಾಗೂ ಮೌಖಿಕ ಆಕರಗಳ ಮೂಲಕ ಇದೇ ಕಸಬಾ ಹೋಬಳಿಯ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ನಡೆಸುವ ಉದ್ದೇಶ ಪ್ರಸ್ತುತ ಅಧ್ಯಯನದ್ದು.

## ಅಧ್ಯಯನದ ವಿಧಾನ

ಒಂದು ಕಾರ್ಯ ಯಶಸ್ವಿಯಾಗಬೇಕಾದರೆ ಕ್ರಮಬದ್ಧತೆ ಅತಿ ಮುಖ್ಯ. ಹಾಗಾಗಿ ಸಂಶೋಧನ ಕಾರ್ಯಕ್ಕೂ ವ್ಯವಸ್ಥಿತ ಅಧ್ಯಯನ ಬಹಳ ಅವಶ್ಯಕವಾದದ್ದು. ಅಧ್ಯಯನವನ್ನು ವೈಜ್ಞಾನಿಕವಾಗಿ ಕ್ಷೇತ್ರಕಾರ್ಯವನ್ನು ಕೈಗೊಂಡು ಪೂರೈಸಲಾಗುವುದು.

ಸಂಶೋಧನೆಗಾಗಿ ಚಳ್ಳಕೆರೆ ಕಸಬಾ ಹೋಬಳಿಯ ಇತಿಹಾಸ ಮತ್ತು ಪುರಾತತ್ವ ಅಧ್ಯಯನ, ಮುಖ್ಯವಾಗಿ ಕ್ಷೇತ್ರಾಧಾರಿತವಾಗಿದೆ. ಅಧ್ಯಯನದ ವ್ಯಾಪ್ತಿಗೆ ಒಳಪಡುವ ಪ್ರದೇಶಗಳಿಗೆ ನೇರವಾಗಿ ಭೇಟಿ ನೀಡಿ ದೊರೆಯುವ ಸಂಪನ್ಮೂಲ ಅವಶೇಷಗಳನ್ನು ಪರಿಶೀಲಿಸಿ, ದಾಖಲಿಸಿಕೊಳ್ಳಲಾಗಿದೆ. ಮೌಖಿಕ ಆಕರಗಳು ಹಾಗೂ ಐತಿಹ್ಯಗಳನ್ನು ಹೊಂದಿದ ಸಂಪನ್ಮೂಲ ವ್ಯಕ್ತಿಗಳೊಂದಿಗೆ ಚರ್ಚಿಸಿ ವಿಷಯ ಸಂಗ್ರಹಿಸಲಾಗಿದೆ. ಅಧ್ಯಯನಕ್ಕೆ ಪೂರಕವಾಗಿ ದೊರೆಯುವ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಪ್ರಾಚ್ಯವಸ್ತು ಮತ್ತು ಗ್ರಂಥಾಲಯಗಳಿಗೆ ಭೇಟಿ ನೀಡಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಸಂಸ್ಥೆ ಪ್ರಕಟಿತ ಕೃತಿಗಳು, ಲೇಖನಗಳು, ವಿವಿಧ ಸಂಚಿಕೆಗಳ ಸಂಶೋಧನಾ ಲೇಖನಗಳು, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧಗಳನ್ನು ಆಧರಿಸಿ ಅವಶ್ಯ ವಿಷಯಗಳನ್ನು ಪರಿಶೀಲಿಸಿ ಮಾಹಿತಿ ಪಡೆದುಕೊಳ್ಳಲಾಗಿದೆ. ಈ ಪರಿಸರದ ಪ್ರಾಚೀನ ಸ್ಮಾರಕಗಳಾದ ದೇವಾಲಯ, ಮೂರ್ತಿಶಿಲ್ಪ, ಪ್ರಾಚೀನ ಕೆರೆಗಳು, ಗ್ರಾಮದೇವತೆಗಳು, ಶಾಕ್ತದೇವತೆಗಳು, ಜಾತ್ರೆ, ಉತ್ಸವಗಳಲ್ಲಿ ಭಾಗವಹಿಸಿ ದಾಖಲೀಕರಣ ಕಾರ್ಯವನ್ನು ಛಾಯಾಚಿತ್ರ ಸಹಿತ ಮಾಡಿಕೊಳ್ಳಲಾಯಿತು. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಎಲ್ಲಾ ಮಾಹಿತಿಗಳನ್ನು ಪರಿಶೀಲಿಸಿ ಸಂಶೋಧನೆಗೆ ತೆಗೆದುಕೊಳ್ಳಲಾಗಿದೆ. ಕಸಬಾ ಹೋಬಳಿಯ ಇತಿಹಾಸ ತಿಳಿಯಲು ಈವರೆಗೆ ದೊರೆತಿರುವ ಶಾಸನಗಳು ನಮಗೆ ಹೆಚ್ಚಿನ ಸಹಾಯಕಾರಿಯಾಗಿವೆ. ಇವುಗಳಲ್ಲದೆ ಅಧ್ಯಯನಕ್ಕೆ ಬೇಕಾದ ನಿಖರವಾದ ಮಾಹಿತಿಗಳನ್ನು ಸಂಗ್ರಹಿಸಿ ಚರಿತ್ರೆಯನ್ನು ವಸ್ತುನಿಷ್ಠವಾಗಿ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಈ ಪ್ರದೇಶದಲ್ಲಿ ಈವರೆಗೆ ಲಭ್ಯವಿರುವ ಪ್ರಾಚ್ಯಾವಶೇಷಗಳ ಅಧ್ಯಯನದ ಜೊತೆಗೆ ಕ್ಷೇತ್ರಕಾರ್ಯ ಕೈಗೊಂಡು, ಸಂದರ್ಶನಗಳ ಮೂಲಕ ಪ್ರಚಲಿತವಾಗಿರುವ ಐತಿಹ್ಯಗಳನ್ನು ದಾಖಲಿಸಿಕೊಳ್ಳಲಾಗಿದೆ. ಅಲ್ಲದೆ ಸಂಗ್ರಹಿತ ಸಂಪನ್ಮೂಲವನ್ನು ವಿವೇಚಿಸುವ ಮೂಲಕ ಸಮಗ್ರ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಈ ಪರಿಸರದಲ್ಲಿ ಅಧ್ಯಯನ ಮಾಡುವ ಸಂದರ್ಭದಲ್ಲಿ ಇಲ್ಲಿನ ಪ್ರಾಚೀನ ದೇವಾಲಯ, ಕೆಲವು ಮೂರ್ತಿಶಿಲ್ಪ, ಕೆರೆಗಳನ್ನು ಕುರಿತು ವಿವರವಾಗಿ ಚರ್ಚಿಸಲಾಗುವುದು. ಇಲ್ಲಿನ ದೇವಾಲಯಗಳಲ್ಲಿ ಪ್ರಾಚೀನತೆಯನ್ನು ರಾಷ್ಟ್ರಕೂಟರ ಕಾಲದಿಂದ ನೊಳಂಬ ಚಿತ್ರದುರ್ಗ ಪಾಳೆಗಾರರು ಹಾಗೂ ವಿಜಯನಗರದ ಅರಸರು ಮತ್ತು ವಿಜಯನಗರೋತ್ತರ ಕಾಲದ ದೇವಾಲಯಗಳನ್ನು ಗುರುತಿಸಿ, ಯಾವ ಮತ್ತು ಯಾರ ಕಾಲಘಟ್ಟಕ್ಕೆ ಸಂಬಂಧಿಸಿದವು ಎಂಬುದನ್ನು ಚರ್ಚಿಸುತ್ತ ಅದರ ಶೈಲಿಯನ್ನು ಕುರಿತು ಅಧ್ಯಯನಕ್ಕೆ ಒಳಪಡಿಸಲಾಗುತ್ತದೆ.

ಸ್ಥಳೀಯ ಚರಿತ್ರೆಯ ಅಧ್ಯಯನದಿಂದ ಹೆಚ್ಚಿನ ಸಂಖ್ಯೆಯ ಆಕರ ಸಾಮಗ್ರಿಗಳನ್ನು ಹೊಂದಿರುವ ಪರಿಸರವು ನೈಸರ್ಗಿಕ, ಬೆಟ್ಟಗುಡ್ಡ, ಕೆರೆ, ಬಾವಿಗಳು ಮತ್ತು ಗುಡಿ–ಗುಂಡಾರಗಳು ಹೆಚ್ಚಿನ ಸಂಖ್ಯೆಯಲ್ಲಿವೆ.

### ಅಧ್ಯಯನದ ಮಹತ್ವ

ಚಳ್ಳಕೆರೆ ಕಸಬಾ ಹೋಬಳಿ ಪರಿಸರದಲ್ಲಿ ಬರುವ ಪ್ರಾಗೈತಿಹಾಸ ಕಾಲದಿಂದ ಹಿಡಿದು ಅರಸುಮನೆತನ ಮತ್ತು ಪಾಳೆಯಗಾರರ ಕಾಲದವರೆಗೂ ಮಹತ್ವವನ್ನು ಪಡೆದಂತಹ ಪ್ರದೇಶವಾಗಿದೆ. ಈ ಪರಿಸರದ ದೊಡ್ಡೇರಿ ಸೂಕ್ಷ್ಮ ಶಿಲಾಯುಗ ಮತ್ತು ಬೃಹತ್ ಶಿಲಾಯುಗದ ನೆಲೆಯಾಗಿದೆ. ಅಲ್ಲದೇ ಚಿಕ್ಕಮಧುರೆಯಲ್ಲಿ ಸೂಕ್ಷ್ಮ ಶಿಲಾಯುಗ ಮತ್ತು ಬೃಹತ್ ಶಿಲಾಯುಗದ ಉಪಕರಣಗಳು

ದೊರೆತಿವೆ. ಇತಿಹಾಸ ಕಾಲಕ್ಕೆ ಸಂಬಂಧಪಟ್ಟಂತೆ ಮೌರ್ಯರಿಂದ ಒಡಿದು ಪಾಳೆಯಗಾರರ ಆಳ್ವಿಕೆಗೆ ಒಳಪಟ್ಟ ಪ್ರದೇಶವಾಗಿದೆ. ಈ ಪ್ರದೇಶದ ಇತಿಹಾಸ ಮತ್ತು ಪುರಾತತ್ವದ ಕುರಿತು ಕೆಲವು ಸಂಶೋಧನೆಗಳು ನಡೆದಿವೆ. ಕೆಲವು ಲೇಖನಗಳು ಸಂಚಿಕೆ ಹಾಗೂ ಪತ್ರಿಕೆಗಳಲ್ಲಿ ಪ್ರಕಟವಾಗಿ ಇಲ್ಲಿಯ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತವೆ. ಆದರೂ ಚಳ್ಳಕೆರೆ ಕಸಬಾ ಹೋಬಳಿ ಪರಿಸರದ ಪುರಾತತ್ವ ಅವಶೇಷಗಳ ಬಗ್ಗೆ ಸಮಗ್ರ ಅಧ್ಯಯನ ನಡೆದಿಲ್ಲ. ಆದುದರಿಂದ ಈ ಕಿರು ಸಂಶೋಧನಾ ಪ್ರಬಂಧದಲ್ಲಿ ಕಸಬಾ ಹೋಬಳಿಯಲ್ಲಿ ಕಂಡುಬರುವ ದೊಡ್ಡೇರಿ, ಚಿಕ್ಕ ಮಧುರೆ ಗ್ರಾಮಗಳ ಪ್ರಾಚ್ಯಾವಶೇಷಗಳಿಗೆ ಮಾತ್ರ ಮಹತ್ವವನ್ನು ನೀಡಲಾಗಿದೆ. ಇಲ್ಲಿ ಕಂಡುಬರುವ ಪುರಾತತ್ವಾವಶೇಷಗಳ ಅಧ್ಯಯನ ನಡೆಸಿ ಪ್ರಸ್ತುತ ಪ್ರಬಂಧವನ್ನು ರಚಿಸಲಾಗಿದೆ.

### ಅಧ್ಯಯನದ ಸ್ವರೂಪ

ಪ್ರಸ್ತುತ ಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳನ್ನಾಗಿ ವಿಭಾಗಿಸಿಕೊಳ್ಳಲಾಗಿದೆ.

ಮೊದಲನೆಯ ಅಧ್ಯಾಯವು ಪ್ರಸ್ತಾವನೆ, ಅಧ್ಯಯನದ ವ್ಯಾಪ್ತಿ, ಉದ್ದೇಶ, ವಿಧಾನ, ಮಹತ್ವ, ಸ್ವರೂಪ ಹಾಗೂ ಸಮೀಕ್ಷೆಗಳನ್ನು ಒಳಗೊಂಡಿದ್ದು ಅಧ್ಯಯನದ ಒಟ್ಟು ರೂಪರೇಷೆಯನ್ನು ಕುರಿತು ಚರ್ಚಿಸುತ್ತದೆ.

ಎರಡನೆಯ ಅಧ್ಯಾಯವು ಕಸಬಾ ಹೋಬಳಿಯ ಪರಿಸರದ ಭೌಗೋಳಿಕ ಅಂಶಗಳಾದ ನೆಲ, ಜಲ, ಬೆಟ್ಟ–ಗುಡ್ಡ, ಜನಸಂಖ್ಯೆ, ವಾಯುಗುಣ, ಮಳೆಯ ಪ್ರಮಾಣ, ಅರಣ್ಯ, ಪ್ರಾಣಿವರ್ಗ ಇತ್ಯಾದಿ ಬಗ್ಗೆ ಪ್ರಸ್ತಾಪಿಸಲಾಗಿದೆ. ಅಲ್ಲದೆ ಪ್ರಾಗಿತಿಹಾಸದ ನೆಲೆಗಳು, ಅಲ್ಲಿ ದೊರೆತಿರುವ ಉಪಕರಣಗಳ ಬಗ್ಗೆ ಚರ್ಚಿಸಲಾಗಿದೆ. ಚಾರಿತ್ರಿಕ ಹಿನ್ನೆಲೆಯ ಉದ್ದೇಶದಿಂದ ಚಳ್ಳಕೆರೆ ಕಸಬಾ ಹೋಬಳಿಯಲ್ಲಿ ಆಡಳಿತ ನಡೆಸಿದ ರಾಜಮನೆತನಗಳ ಬಗ್ಗೆ ಅಧ್ಯಯನ ಕೈಗೊಳ್ಳಲಾಗಿದೆ (ಮೌರ್ಯರಿಂದ ಪಾಳೆಯಗಾರ).

ಮೂರನೇ ಅಧ್ಯಾಯದಲ್ಲಿ ಸ್ಥಳದ ನಾಮನಿಷ್ಪತ್ತಿ ಬಗ್ಗೆ, ಸ್ಥಳನಾಮ, ಸ್ಥಳಪುರಾಣ ಮತ್ತು ಐತಿಹ್ಯಗಳನ್ನು ಗಮನದಲ್ಲಿಟ್ಟುಕೊಂಡು ವಿವರವಾಗಿ ಅಧ್ಯಯನ ಕೈಗೊಳ್ಳಲಾಗುತ್ತದೆ.

ನಾಲ್ಕನೆಯ ಅಧ್ಯಾಯದಲ್ಲಿ ದೇವಾಲಯಗಳು ಹಾಗೂ ಮೂರ್ತಿಶಿಲ್ಪಗಳ ಕುರಿತಾಗಿದ್ದು, ವಾಸ್ತುಶಿಲ್ಪ ಭಾಗದಲ್ಲಿ ದೇವಾಲಯದ ಉಗಮ, ವಿಕಾಸದ ಬಗ್ಗೆ ಮತ್ತು ಇಲ್ಲಿನ ಶೈವ, ವೈಷ್ಣವ, ಶಾಕ್ತ ಹಾಗೂ ಗ್ರಾಮದೇವತೆಗಳು ಎಂದು ವಿಂಗಡಿಸಿಕೊಂಡು ವಿಶ್ಲೇಷಿಸಲಾಗುವುದು.

ಅಧ್ಯಾಯ ಐದರಲ್ಲಿ ಚಳ್ಳಕೆರೆ ಕಸಬಾ ಹೋಬಳಿಯಲ್ಲಿ ಬರುವ ಪ್ರಾಚೀನ ಕೆರೆಗಳನ್ನು ಕುರಿತು ಚರ್ಚಿಸಲಾಗುವುದು. ಈ ಕೆರೆಗಳ ನಿರ್ಮಾಣ, ಕಾಲಮಾನ, ತಂತ್ರಜ್ಞಾನ, ಸಾಮರ್ಥ್ಯದ ಬಗ್ಗೆ ಮಾಹಿತಿ ನೀಡಲಾಗುತ್ತದೆ.

ಅಧ್ಯಾಯ ಆರು ಸಮಾರೋಪವಾಗಿದ್ದು, ಮಹಾಪ್ರಬಂಧ ರಚಿಸಲು ಕೈಗೊಂಡ ಪ್ರಯತ್ನ, ಅದರಲ್ಲಿ ಕಂಡುಕೊಂಡ ಒಟ್ಟಾರೆ ಸಂಶೋಧನೆಯ ಫಲಿತಾಂಶಗಳ ಸಂಕ್ಷಿಪ್ತ ರೂಪವಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡ ಕೃತಿ, ಲೇಖನ, ಶಾಸನ ಸಂಪುಟ, ಅಪ್ರಕಟಿತ ಸಂಶೋಧನ, ಪ್ರೌಢಪ್ರಬಂಧ ಮುಂತಾದ ವಿವರಗಳನ್ನು ಗ್ರಂಥಋಣದಲ್ಲಿ ನೀಡಲಾಗಿದೆ. ಅಧ್ಯಯನಕ್ಕೆ ಸಂಬಂಧಿಸಿದಂತೆ ಛಾಯಾಚಿತ್ರಗಳು, ಅಗತ್ಯ ನಕ್ಷೆಗಳನ್ನು ಅನುಬಂಧದಲ್ಲಿ ಅಳವಡಿಸಲಾಗಿದೆ.

## ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಚಳ್ಳಕೆರೆ ಕಸಬಾ ಹೋಬಳಿಗೆ ಸಂಬಂಧಿಸಿದಂತೆ ಈ ಭಾಗದಲ್ಲಿ ದೊರೆತ ಆಧಾರಗಳು ಎಂದರೆ ದೇವಾಲಯಗಳು ಹಾಗೂ ಶಾಸನಗಳು. ಹಾಗಾಗಿ ಇಡೀ ಅಧ್ಯಯನವು ಕ್ಷೇತ್ರಕಾರ್ಯವನ್ನು ಆಧರಿಸಿ ಸಂಗ್ರಹಗೊಂಡಿದೆ.

ಚಳ್ಳಕೆರೆ ಕಸಬಾ ಹೋಬಳಿಯನ್ನು ಕುರಿತು ಈವರೆಗೆ ಕೆಲವು ವಿದ್ವಾಂಸರು ಪುರಾತತ್ವ ಸಂಶೋಧನ ಕಾರ್ಯಗಳನ್ನು ಕೈಗೊಂಡು ಬಿಡಿ ಲೇಖನಗಳನ್ನು ಸಂಗ್ರಹಿಸಿ, ಸಂಪಾದಿತ ಕೃತಿಗಳಲ್ಲಿ ಪ್ರಕಟಿಸಿದ್ದಾರೆ. ಕೆಲವು ಸ್ಮರಣ ಸಂಚಿಕೆಗಳಲ್ಲಿ ಸಂಶೋಧನಾ ಲೇಖನಗಳು ಪ್ರಕಟಗೊಂಡಿವೆ.

ಚಳ್ಳಕೆರೆ ತಾಲೂಕಿನ ಚರಿತ್ರೆಯ ಕುರಿತ ಪ್ರಕಟನೆಗಳಲ್ಲಿ ೧೯೦೩ರಲ್ಲಿ ಪ್ರಕಟವಾದ ಬಿ.ಎಲ್. ರೈಸ್ ಸಂಪಾದಿತ 'ಎಪಿಗ್ರಾಫಿಯ ಕರ್ನಾಟಿಕ' ಸಂಪುಟ-೧೧, ೧೯೬೭ರಲ್ಲಿ ಪ್ರಕಟಗೊಂಡ ಲಕ್ಷ್ಮಣ್ ತೆಲಗಾವಿ ಮತ್ತು ಎಂ.ವಿ. ಶ್ರೀನಿವಾಸರವರ ಸಂಪಾದಿಸಿದ 'ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು', 'ಚಿತ್ರದುರ್ಗ ಜಿಲ್ಲೆಯ ದೇವಾಲಯಗಳ ಕೋಶ' ಎಸ್.ವೈ. ಸೋಮಶೇಖರ್, 'ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು' ಮತ್ತು ಚಂದ್ರವಳ್ಳಿ ಎಂಬ ಗ್ರಂಥ ಸಹ ರಚಿಸಿದ್ದಾರೆ. ಟಿ. ಗಿರಿಜಾ ಅವರು ಪ್ರಕಟಿಸಿರುವ 'ಚಿತ್ರದುರ್ಗ ಜಿಲ್ಲಾ ದರ್ಶಿನಿ' ಕೃತಿಯು ಚಳ್ಳಕೆರೆಯ ಕಸಬಾ ಹೋಬಳಿಯ ಕೆಲವು ವಿಷಯಗಳ ವಿವರಗಳನ್ನು ತಿಳಿಸುವ ಬಹುಮುಖ್ಯ ಪ್ರಯತ್ನ ಮಾಡಿವೆ.

Mysore Archaelogical Report-1947-51ರಲ್ಲಿ ಈ ಪ್ರದೇಶದ ಚಿಕ್ಕಮಧುರೆ ಹಾಗೂ ಹಿರೇಮಧುರೆ ಗ್ರಾಮಗಳ ಸ್ತಂಭಶಾಸನಗಳ ಬಗ್ಗೆ ವಿವರವಿದೆ. ಡಾ. ಶೇಷಶಾಸ್ತ್ರಿ ಅವರು ತಮ್ಮ 'ಕರ್ನಾಟಕ ವೀರಗಲ್ಲು' ಕೃತಿಯಲ್ಲಿ ಈ ಪ್ರದೇಶದ ಕೆಲವು ವೀರಗಲ್ಲುಗಳ ಬಗ್ಗೆ ಅಧ್ಯಯನ ನಡೆಸಿದ್ದಾರೆ.

ಶಿವತಾರಕ್ ಕೆ.ಜಿ. ಅವರು 'ಕರ್ನಾಟಕ ಪುರಾತತ್ವ ನೆಲೆಗಳು' ಎಂಬ ಕೃತಿಯಲ್ಲಿ ಈ ಚಿಕ್ಕಮಧುರೆ ಗ್ರಾಮದ ನೆಲೆಯ ಬಗ್ಗೆ ತಿಳಿಸಿದ್ದಾರೆ.

ರಾಮದಾಸ್ ರೆಡ್ಡಿಯವರು ದೊಡ್ಡೇರಿ ಗ್ರಾಮದ ಪ್ರಾಗೈತಿಹಾಸಿಕ ನೆಲೆಯನ್ನು ಕುರಿತು ಅಧ್ಯಯನ ಮಾಡಿ ವಿವಿಧ ಲೇಖನ ಹಾಗೂ ತಮ್ಮ ಕೃತಿ 'ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ' ಎನ್ನುವ ಗ್ರಂಥವನ್ನು ಪ್ರಕಟಿಸಿದ್ದಾರೆ.

ಬಸವರಾಜಪ್ಪ ಜಿ.ಎನ್. ಅವರು ದೊಡ್ಡೇರಿಯ ಬಗ್ಗೆ ಅಧ್ಯಯನ ಮಾಡಿ ತಮ್ಮ 'ದೊಡ್ಡೇರಿಯ' ಇತಿಹಾಸ ದರ್ಶನ ಕೃತಿ ಪ್ರಕಟಿಸಿರುವರು.

ಡಿ. ಸೀತಾರಾಮಪ್ಪನವರ 'ಚಳ್ಳಕೆರೆ ವಿಕಾಸ ಸಮೀಕ್ಷೆ' ಮೀರಾಸಾಬಿಹಳ್ಳಿ ಶಿವಣ್ಣನವರ ಅಪ್ರಕಟಿತ 'ಚಳ್ಳಕೆರೆ ತಾಲ್ಲೂಕು ದರ್ಶನ' ಕಿರುಪುಸ್ತಕಗಳು ತಾಲ್ಲೂಕಿನ ಬಗೆಗೆ ಸ್ಥೂಲವಾದ ವಿವರ ನೀಡುವಲ್ಲಿ ಸಫಲವಾಗಿದೆ. ಬಿ. ಸುರೇಶ್ ಅವರ "ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳ ಪುರಾತತ್ವ" ಎಂಬ ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ. ಎಸ್. ತಿಪ್ಪೇಸ್ವಾಮಿಯವರ 'ರಕ್ಷಣಾ ವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ' ಅಪ್ರಕಟಿತ ಮಹಾಪ್ರಬಂಧ.

ಕೆ.ಪಿ. ನಾಗೇಂದ್ರಸಾಮಿಯವರು 'ಚಿತ್ರದುರ್ಗ ಜಿಲ್ಲೆಯಲ್ಲಿ ಅಮೃತ್‌ಮಹಲ್ ತಳಿ ಸಂವರ್ಧನೆ: ಚಾರಿತ್ರಿಕ ಅಧ್ಯಯನ' ಎನ್ನುವ ಎಂ.ಫಿಲ್. ಕಿರುಪ್ರಬಂಧವನ್ನು ರಚಿಸಿದ್ದಾರೆ.

ತಿಪ್ಪಣ್ಣ ಬಿ. ಮರಿಕುಂಟೆಯವರು ಸಂಪಾದಿಸಿರುವ 'ಮೇಲುದುರ್ಗ', ಮದಕರಿ ಬಳಗದ ವಾರ್ಷಿಕ ಸಂಚಿಕೆಗಳಾದ 'ಚಿನ್ಮೂಲಾದ್ರಿ ಕೃತಿಗಳು' ಸಹ ಪ್ರಕಟಗೊಂಡಿವೆ.

ಶಿವಕುಮಾರ್ ಡಿ.ಎಸ್. ಅವರು 'ನಮ್ಮೂರಿನಿಂದ ಹಿಮಾಲಯದತ್ತ ದೊಡ್ಡೇರಿ' ಎಂಬ ಕೃತಿ ರಚನೆಗೊಂಡಿದೆ. ೧೯೬೭ರಲ್ಲಿ ಪ್ರಕಟಗೊಂಡ ಬಿ.ಎನ್. ಶ್ರೀಸತ್ಯನ್ ಅವರು ರಚಿಸಿದ 'ಚಿತ್ರದುರ್ಗ ಜಿಲ್ಲಾ ಗೆಜೆಟಿಯರ್', ವೇದಮೂರ್ತಿ ಪಿ. ಪಾಲಯ್ಯ 'ಚಳ್ಳಕೆರೆ ತಾಲೂಕು ಪರಿಸರದ ಸಾಂಸ್ಕೃತಿಕ ಅಧ್ಯಯನ' ಎಂಬ ಸಂಪ್ರಬಂಧ ಸಹ ರಚನೆಗೊಂಡಿದೆ.

ಎ.ಎಸ್. ಪ್ರಭಾಕರ ಅವರ 'ವ್ಯಾಸಬೇಡರ ಕಥನಗಳು' ಮತ್ತು ವಿರೂಪಾಕ್ಷಿ ಪೂಜಾರಹಳ್ಳಿಯವರ 'ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು' ಕೃತಿ ರಚನೆಗೊಂಡಿದೆ. ಆದರೆ ಚಳ್ಳಕೆರೆ ಕಸಬಾ ಹೋಬಳಿ ಇತಿಹಾಸ ಮತ್ತು ಪುರಾತತ್ವವನ್ನು ಕೇಂದ್ರವನ್ನಾಗಿಟ್ಟುಕೊಂಡು ಯಾವುದೇ ಅಧ್ಯಯನಗಳು ಇದುವರೆಗೆ ನಡೆದಿಲ್ಲ. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಚಳ್ಳಕೆರೆ ಕಸಬಾ ಹೋಬಳಿ ಇತಿಹಾಸ ಮತ್ತು ಪುರಾತತ್ವ ಪರಿಸರದ ಬಗೆಗಿನ ವಿವರಗಳನ್ನು ಸಮಗ್ರವಾಗಿ ಕಟ್ಟಿಕೊಡುವುದು ಈ ಅಧ್ಯಯನದ ಉದ್ದೇಶವಾಗಿದೆ.



# ಅಧ್ಯಾಯ: ಎರಡು

# ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

## ೨.೧. ಭೌಗೋಳಿಕ ಪರಿಸರ

ಯಾವುದೇ ಒಂದು ಪ್ರದೇಶದ ವಿವರಗಳನ್ನು ತಿಳಿದುಕೊಳ್ಳಲು ಆಯಾ ಪ್ರದೇಶದಲ್ಲಿರುವ ನೈಸರ್ಗಿಕ ವಿವರಗಳ ಪ್ರಾಥಮಿಕ ಅರಿವು ಇರುವುದು ಮುಖ್ಯವೆನಿಸುತ್ತದೆ. ಇಂತಹ ತಿಳುವಳಿಕೆಯಿಂದ ನಿರ್ದಿಷ್ಟಪಡಿಸಿದ ಪ್ರದೇಶದ ವಿವರಗಳನ್ನು ತಿಳಿದುಕೊಳ್ಳಬಹುದಾಗಿದೆ. ಪರಿಸರವು ಆತನ ಚಟುವಟಿಕೆಗಳನ್ನಷ್ಟೆ ಅಲ್ಲದೆ, ಸ್ವಭಾವ ಮತ್ತು ರೂಢಿಗಳ ಮೇಲೆಯೂ ಪ್ರಭಾವ ಬೀರುತ್ತದೆ. ಭೂಗೋಳಶಾಸ್ತ್ರವು ಭೂಮಿಯ ಮೇಲೆ ಹರಡಿರುವ ನಿಸರ್ಗ ನಿರ್ಮಿತವಾದ ಬೆಟ್ಟ, ಗುಡ್ಡ, ಗವಿ, ಖನಿಜ, ಹಳ್ಳ, ಕಾಡು, ಫಲವತ್ತಾದ ಮಣ್ಣು, ಪ್ರಾಣಿ ಮತ್ತು ಮನುಷ್ಯಸಂಕುಲ ಮೊದಲಾದ ವಸ್ತುಗಳನ್ನು ವಿವರಿಸುತ್ತದೆ. ಹಾಗಾಗಿಯೇ ಜರ್ಮನ್ ತತ್ವಜ್ಞಾನಿ ಮತ್ತು ಭೂಗೋಳಶಾಸ್ತ್ರಜ್ಞ ಇಮ್ಯಾನುಯಲ್ ಕಾಂಟ್ ಭೂಗೋಳಶಾಸ್ತ್ರವನ್ನು "ಪೃಥ್ವಿಯ ಮೇಲೆ ಸಂಭವಿಸುವ ಘಟನೆಗಳ ವರದಿ" ಎಂದು ಹೇಳಿದ್ದಾನೆ.[೧] ಆಯಾ ಪ್ರದೇಶದ ಜನರ ಜೀವನವನ್ನು ರೂಪಿಸುವಲ್ಲಿ ಭೌಗೋಳಿಕ ಪರಿಸರದ ಪಾತ್ರ ಪ್ರಮುಖವಾಗಿದೆ. ಪ್ರಾಚೀನ ನಾಗರಿಕತೆಗಳ ಉಗಮ ಮತ್ತು ವಿಕಾಸ ನದಿ ದಂಡೆಗಳ ಮೇಲೆ ಆಗಿರುವುದಷ್ಟೆ ಗಮನಿಸಬಹುದಾದ ಭೌಗೋಳಿಕ ಅಂಶಗಳ ಪ್ರಾಮುಖ್ಯತೆಯನ್ನು ತಿಳಿಯಬಹುದು. ಯಾವುದೇ ಒಂದು ಪ್ರದೇಶದ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಬೌದ್ಧಿಕ ಹಾಗೂ ಸಾಂಸ್ಕೃತಿಕ ಪರಂಪರೆಯ ಹಿನ್ನಡೆ, ಮುನ್ನಡೆಗೆ ಭೌಗೋಳಿಕ ಪರಿಸರವೇ ಪ್ರಧಾನವಾಗಿದೆ. ಭೌಗೋಳಿಕ ಪರಿಸರದ ಅಧ್ಯಯನ ಆ ಭಾಗದ ಸ್ಥಿತಿಯನ್ನು ತಿಳಿಯಲು ಪ್ರಮುಖ ಆಕರವಾಗಿರುತ್ತದೆ.

### ಭೌಗೋಳಿಕ ರಚನೆ

ಕರ್ನಾಟಕ ರಾಜ್ಯದ ಮಧ್ಯಭಾಗದಲ್ಲಿರುವ ಚಿತ್ರದುರ್ಗ ಜಿಲ್ಲೆಯ ಆರು ತಾಲೂಕುಗಳಲ್ಲಿ ಚಳ್ಳಕೆರೆ ತಾಲೂಕು ಒಂದಾಗಿದ್ದು, ತಾಲೂಕಿನ ಆಡಳಿತ ಕೇಂದ್ರವಾಗಿ. ಚಿತ್ರದುರ್ಗ ಉಪವಿಭಾಗಕ್ಕೆ

ಸೇರಿದ್ದು, ಈ ತಾಲೂಕಿನ ವ್ಯಾಪ್ತಿಯಲ್ಲಿ ನಾಲ್ಕು ಹೋಬಳಿಗಳನ್ನು ಒಳಗೊಂಡಿದೆ. ಕಸಬಾ, ತಳಕು, ಪರಶುರಾಂಪುರ ಮತ್ತು ನಾಯಕನಹಟ್ಟಿ ಹೋಬಳಿಗಳು ಸಮಾವೇಶಗೊಂಡಿವೆ.

ಚಳ್ಳಕೆರೆ ಕಸಬಾ ವ್ಯಾಪ್ತಿಯು ವೈವಿಧ್ಯತೆಯಿಂದ ಕೂಡಿರುವುದು ಕಂಡುಬರುತ್ತದೆ. ಈ ಹೋಬಳಿಯು ೪೭ ಹಳ್ಳಿಗಳನ್ನು ಒಳಗೊಂಡಿದ್ದು, ಇವುಗಳಲ್ಲಿ ೧೦ ಗ್ರಾಮ ಪಂಚಾಯಿತಿಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ, ದೇವರಮರಿಕುಂಟೆ, ಗೋಪನಹಳ್ಳಿ, ನನ್ನಿವಾಳ, ಬುಡ್ನಹಟ್ಟಿ, ರಾಮಜೋಗಿಹಳ್ಳಿ, ದೊಡ್ಡೇರಿ, ಮೀರಾಸಾಬಿಹಳ್ಳಿ, ಸೋಮಗುದ್ದು, ಸಾಣಿಕೆರೆ, ನಗರಂಗೆರೆ ಎಂದು ವಿಂಗಡಿಸಲಾಗಿದೆ.[೨] ಕಸಬಾ ಹೋಬಳಿಯ ಒಟ್ಟು ಭೌಗೋಳಿಕ ವಿಸ್ತೀರ್ಣ ೫೪೪.೪೯ ಹೆಕ್ಟೇರ್ ಪ್ರದೇಶವಾಗಿದ್ದು, ಸಾಗುವಳಿ ವಿಸ್ತೀರ್ಣ ೩೭೬೬೫.೬೨ ಹೆಕ್ಟೇರ್ ಪ್ರದೇಶ ಮಾತ್ರ ವ್ಯವಸಾಯಕ್ಕೆ ಯೋಗ್ಯವಾಗಿದೆ. ಖುಷ್ಕಿ ವಿಸ್ತೀರ್ಣ ೩೭೧೯.೭೦ ಹೆಕ್ಟೇರ್ ಪ್ರದೇಶ ಒಳಗೊಂಡಿದ್ದು ಮತ್ತೆ ನೀರಾವರಿ ವಿಸ್ತೀರ್ಣ ೩೭೪೬.೩೮ ಹೆಕ್ಟೇರ್ ಪ್ರದೇಶ ಸಹ ಕಂಡುಬರುತ್ತದೆ.[೩]

ಚಳ್ಳಕೆರೆ ಕಸಬಾ ಹೋಬಳಿಯ ರೈತ ಕುಟುಂಬಗಳ ಸಂಖ್ಯೆ ೧೮೦೦೨ ಒಳಗೊಂಡಿದ್ದು ಇದರಲ್ಲಿ ಸಣ್ಣ ರೈತರು ೬೪೮೦, ಅತಿ ಸಣ್ಣ ರೈತರು ೬೭೦೦, ದೊಡ್ಡ ರೈತರು ೬೪೧೮ ರೈತ ಕುಟುಂಬಗಳು ಒಳಗೊಂಡಿದ್ದು ಇದರ ಅಂಕಿ-ಅಂಶಗಳನ್ನು ೨೦೧೧ರ ಜನಗಣತಿಯ ಪ್ರಕಾರ ಮಾಹಿತಿಯನ್ನು ಕಲೆಹಾಕಲಾಗಿದೆ.[೪]

೨೦೧೧ರ ಜನಗಣತಿಯ ಪ್ರಕಾರ ಕಸಬಾ ಹೋಬಳಿಯ ಒಟ್ಟು ಜನಸಂಖ್ಯೆ ೭೬.೬೫೩ ರಷ್ಟಿದ್ದು, ಇದರಲ್ಲಿ ೩೯.೩೮೧ ಪುರುಷರು ಮತ್ತು ೩೭.೨೭೨ ಮಹಿಳೆಯರ ಸಂಖ್ಯೆ ಕಂಡುಬಂದಿದೆ. ಇದರಿಂದ ಲಿಂಗಾನುಪಾತ ಸಂಖ್ಯೆ ಪ್ರತಿ ಸಾವಿರ ಪುರುಷರಿಗೆ ೯೭೬ರಷ್ಟು ಮಹಿಳೆಯರು ಕಂಡುಬಂದಿದ್ದಾರೆ.

ಭೌಗೋಳಿಕವಾಗಿ ಚಳ್ಳಕೆರೆ ಕೇಂದ್ರದ ಸ್ಥೂಲವಾಗಿ ಪೂರ್ವ ರೇಖಾಂಶ ೭೬.೨೭°-೭೭° ಮತ್ತು ೧೪.೦೫°-೧೪.೩೭° ನಡುವೆ ಹರಡಿಕೊಂಡಿದೆ.[೫]

## ಮಳೆ ಮತ್ತು ಹವಾಮಾನ

ಈ ಪ್ರದೇಶವು ಕರ್ನಾಟಕದಲ್ಲಿಯೇ ಕಡಿಮೆ ಮಳೆ ಬೀಳುವ ಪ್ರದೇಶವೆಂದು ಗುರುತಿಸಿ ಕೊಂಡಿದ್ದು, ಬಯಲುಸೀಮೆಯ ಪ್ರದೇಶವಾಗಿದ್ದು ಇಲ್ಲಿನ ವಾಡಿಕೆಯಂತೆ ಮಳೆ ಪ್ರಮಾಣ ೪೬೪.೫ ಮಿಲಿಮೀಟರ್ ವಾಸ್ತವಿಕ ಮಳೆಯ ಪ್ರಮಾಣ(ಕಸಬಾ ಹೋಬಳಿ) ೨೦೧೮ ಮೇ-ಜೂನ್ ೨೩೭.೧೮ ಮಿಲಿಮೀಟರ್ ಬಿದ್ದಿದೆ.

ಸಾಮಾನ್ಯವಾಗಿ ಉಷ್ಣವಲಯದಲ್ಲಿ ಬರುವ ಈ ಪ್ರದೇಶವು ಸಮುದ್ರ ಮಟ್ಟದಿಂದ ಕಡಿಮೆ ಎತ್ತರದಲ್ಲಿದೆ. ಹವಾಮಾನವು ಬೇಸಿಗೆಯಲ್ಲಿ ಹೆಚ್ಚು ಉಷ್ಣಾಂಶವಿರುವ ತಿಂಗಳಾಗಿದ್ದು ಉಷ್ಣಾಂಶವು ೪೧ ಸೆಲ್ಸಿಯಸ್‌ವರೆಗೂ ದಾಖಲಾಗುತ್ತದೆ. ನವೆಂಬರ್ ಮತ್ತು ಡಿಸೆಂಬರ್ ತಿಂಗಳುಗಳ ತಂಪಾದ ಹವಾಮಾನವನ್ನು ಅಂದರೆ ೧೪° ಸೆಲ್ಸಿನಷ್ಟು ದಾಖಲಾಗುತ್ತದೆ.

## ಮಣ್ಣಿನ ಮಾದರಿ ಮತ್ತು ಬೆಳೆಗಳು

ಕರ್ನಾಟಕದಲ್ಲಿಯೇ ಚಿತ್ರದುರ್ಗ ಶಿಲಾಪದರ ವಲಯವು ಪ್ರಸಿದ್ಧಿಯನ್ನು ಹೊಂದಿದೆ. ಚಳ್ಳಕೆರೆ ಕಸಬಾ ಪರಿಸರವು ಸ್ವಲ್ಪ ಭಾಗ ಸಮತಟ್ಟಾಗಿದ್ದು, ಅಲ್ಲಲ್ಲಿ ಉಬ್ಬು ತಗ್ಗುಗಳಿಂದ ಅಥವಾ ಏರಿಳಿತದಿಂದ ಕೂಡಿದೆ. ವಿಶೇಷವಾಗಿ ಕಲ್ಲು ಮಿಶ್ರಿತ ಕೆಂಪು ಭೂಮಿ, ಕೆಲವು ಕಡೆ ಮಾತ್ರ ಕಪ್ಪು ನೆಲವಿದೆ. ವ್ಯವಸಾಯಕ್ಕೆ ಅಂತಹ ಯೋಗ್ಯವಾದ ಭೂಮಿಯೇನಲ್ಲ. ಹಲವು ಕಡೆಗಳಲ್ಲಿ ಮಣ್ಣು ಲವಣಯುಕ್ತವಾದುದಾಗಿದೆ.

ಕೆಂಪು ಮಣ್ಣು ಮತ್ತು ಕಪ್ಪು ಮಣ್ಣು ತೇವಾಂಶದಿಂದ ಕೂಡಿರುವುದರಿಂದ ಈ ಪ್ರದೇಶದಲ್ಲಿ ಒಣ ಬೇಸಾಯ ಅಥವಾ ಖುಷ್ಕಿ ಬೆಳೆಗಳನ್ನು ಚೆನ್ನಾಗಿ ಬೆಳೆಯುತ್ತಾರೆ. ಖುಷ್ಕಿ ಬೆಳೆಗಳಾದ ಸಾಸಿವೆ, ಸಜ್ಜೆ, ರಾಗಿ, ನವಣೆ, ಕುಸುಬೆ, ತೊಗರಿ, ಶೇಂಗಾ, ಕಡಲೆ, ಇತರೆ ಎಣ್ಣೆ ಬೀಜಗಳು ಮುಖ್ಯ ಬೆಳೆಗಳಾಗಿ ನಮಗೆ ಕಂಡುಬರುತ್ತವೆ. ಇತ್ತೀಚಿನ ದಿನಗಳಲ್ಲಿ ಕೊಳವೆಬಾವಿಗಳೊಂದಿಗೆ ಈರುಳ್ಳಿ ವಾಣಿಜ್ಯ ಬೆಳೆಯಾಗಿ ಹೆಚ್ಚಾಗಿ ಬೆಳೆಯುತ್ತಿದ್ದ ಈ ಪ್ರದೇಶದಲ್ಲಿ ಖುಷ್ಕಿ ಬೆಳೆಯಲ್ಲಿ ಶೇಂಗಾ(ನೆಲಗಡಲೆ) ಪ್ರಮುಖ ಬೆಳೆಯಾಗಿದೆ.

## ಬೆಟ್ಟ ಗುಡ್ಡಗಳು

ಚಳ್ಳಕೆರೆಯ ಕಸಬಾ ಹೋಬಳಿಯಲ್ಲಿ ಬೆಟ್ಟಗುಡ್ಡಗಳು ನಿಸರ್ಗವು ನೀಡಿದ ಉಚಿತ ನೈಸರ್ಗಿಕ ಸಂಪನ್ಮೂಲಗಳಾಗಿವೆ. ತಾಲ್ಲೂಕಿನ ಬಹುಭಾಗ ಬಯಲು ಸೀಮೆಯಾದ್ದರಿಂದ ಬೆಟ್ಟ ಗುಡ್ಡಗಳು ಕಂಡುಬರುವುದು ವಿರಳ. ಆದ್ದರಿಂದ ಇವು ಮಾನವನ ಜೀವನದಲ್ಲಿ ಕೆಲವೊಮ್ಮೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಪ್ರಭಾವ ಬೀರುತ್ತವೆ.[೭] ಅದರಂತೆ ಮಾನವನು ತನ್ನ ಬುದ್ಧಿ ಚಾತುರ್ಯ ಮತ್ತು ಕುಶಲತೆಗಳ ಮೂಲಕ ನೈಸರ್ಗಿಕ ಪರಿಸರವನ್ನು ಪ್ರಾಚೀನ ಕಾಲದಿಂದಲೂ ಇಂತಹ ಬೆಟ್ಟ ಗುಡ್ಡಗಳು ಶತ್ರುಗಳು ಪ್ರವೇಶ ಮಾಡದೆ ಹಾಗೆ ರಕ್ಷಿಸಿಕೊಳ್ಳಲು ಪ್ರಕೃತಿನಿರ್ಮಿತ ಗುಹೆಗಳಿರುತ್ತವೆ. ಈ ಪರಿಸರವು ಚದುರಿದಂತೆ ಕೆಲವು ಕಣಶಿಲೆಯ ಬೆಟ್ಟ ಶ್ರೇಣಿಗಳಿವೆ. ಉಳಿದ ಭಾಗ ಒಡೆದ ಸ್ವಲ್ಪ ಏರು ತಗ್ಗಿನ ಮೈದಾನ ಪ್ರದೇಶವಾಗಿದೆ.[೮] ಈ ಪ್ರದೇಶದಲ್ಲಿ ನಮಗೆ ಕಂಡುಬರುವ ಪ್ರಮುಖ ಬೆಟ್ಟಗುಡ್ಡಗಳೆಂದರೆ ನನ್ನಿವಾಳ ಗುಡ್ಡದಲ್ಲಿ ಆದಿಮಾನವನ ಕಾಲದ ಬಯಲು ಬಂಡೆ ರೇಖಾಚಿತ್ರಗಳನ್ನು ಕಾಣಬಹುದಾಗಿದೆ.

## ಅರಣ್ಯ ಸಂಪತ್ತು

ಚಳ್ಳಕೆರೆ ತಾಲ್ಲೂಕಿನ ನಾಯನಕಹಟ್ಟಿ ಪ್ರದೇಶವು ಕರ್ನಾಟಕದಲ್ಲಿಯೇ ಅತಿ ಕಡಿಮೆ ಮಳೆ ಬೀಳುವ ಪ್ರದೇಶವೆಂದು ಅಂಕಿಅಂಶಗಳಿಂದ ಗುರುತಿಸಲಾಗಿದೆ. ಆದ್ದರಿಂದ ಇಲ್ಲಿ ಅರಣ್ಯ ಸಂಪತ್ತು ಕಡಿಮೆಯೇ ಎಂದು ಹೇಳಬೇಕಾಗುತ್ತದೆ. ಹಾಗಾಗಿ ಈ ಪ್ರದೇಶವನ್ನು 'ಬಯಲುಸೀಮೆ' ಎಂದು ಗುರುತಿಸಲಾಗುತ್ತಿದೆ. ತಾಲೂಕಿನ ಒಟ್ಟು ಅರಣ್ಯ ವಿಸ್ತೀರ್ಣ ೬,೯೭೮ ಹೆಕ್ಟೇರ್‌ರಷ್ಟಿದೆ.[೯] ಮಳೆಯ ಪ್ರಮಾಣ ಕಡಿಮೆ ಇರುವುದರಿಂದ ದಟ್ಟ ಅರಣ್ಯಗಳಿರದೇ ಪೊದೆಗಳು ಮತ್ತು

ಎತ್ತರವಲ್ಲದ ಮರಗಳನ್ನು ಕಾಣಬಹುದಾಗಿದೆ. ಇಲ್ಲಿನ ಅರಣ್ಯಗಳು ಮಾನವ ರಕ್ಷಿತ ಅರಣ್ಯಗಳಾಗಿದ್ದು, ಎಲೆ ಉದುರುವ ವೃಕ್ಷಗಳು, ಮುಳ್ಳು ಗಿಡಗಳು, ಕುರುಚಲು ಕಾಡು ಸಾಮಾನ್ಯವಾಗಿ ಕಂಡುಬರುತ್ತದೆ. ಮಳೆಗಾಲದಲ್ಲಿ ಚಿಗುರಿ ಮೈತುಂಬುವ ಸೌಂದರ್ಯವನ್ನು ಮನಮೋಹಿತಗೊಳಿಸುತ್ತದೆ.

ಈ ಪ್ರದೇಶದಲ್ಲಿ ಕಂಡುಬರುವ ಸಸ್ಯಗಳನ್ನು ಪ್ರಮುಖವಾಗಿ ನಾಲ್ಕು ಭಾಗಗಳಾಗಿ ವಿಂಗಡಿಸಬಹುದು. ನೆಲಮಟ್ಟದಿಂದ ಮೂರು ಅಡಿಗಳವರೆಗೆ ಬೆಳೆಯುವ ಪೊದರುಗಳು(ಉದಾ. ಕಕ್ಕೆ, ತಂಗಡಿ, ನೆಲಬಂದರಿ, ಕಾರೆ) ಇತ್ಯಾದಿ.

ಎತ್ತರವಾಗಿ ಬೆಳೆದು ಡಿಸೆಂಬರ್ ತಿಂಗಳಿಂದ ಎಲೆಯುದುರಿ ವಸಂತ ಮಾಸದಲ್ಲಿ ಚಿಗುರುವ ಗಿಡಗಳು ಉದಾ. ಬೇವು, ಜಾಲಿ, ಚಿಗರೆ, ಹಿಪ್ಪೆ, ಹುಣಸೆ, ಹಲಸು, ನೀಲಗಿರಿ ಮರಗಳು ಸಹ ಅಲ್ಲಲ್ಲಿ ಕಂಡುಬರುತ್ತವೆ. ಈ ಪ್ರದೇಶದ ಸುತ್ತಮುತ್ತ ಮಾವು, ತೆಂಗು, ಅಡಿಕೆ ಮರಗಳನ್ನು ಅಲ್ಪ ಪ್ರಮಾಣದಲ್ಲಿ ಕಾಣಬಹುದು. ಹಾಲು ತುಂಬಿರುವ ಎಲೆಗಳಿಲ್ಲದ ಗಿಡಗಳು (ಉದಾ. ಪಾಪಸ್‌ಕಳ್ಳಿ, ಬಂದಗಳ್ಳಿ, ಕಳ್ಳಿಗಿಡಗಳು), ತಿನ್ನಲು ಉಪಯೋಗಿಸುವ ಫಲಗಳನ್ನು ಬಿಡುವ(ಉದಾ. ಸೀತಾಫಲ, ದೇವದಾರು ಹಣ್ಣು, ಅರಳೆಕಾಯಿ, ಕಾರೆಕಾಯಿ) ಮೊದಲಾದ ಗಿಡಗಳು ಕಂಡುಬರುತ್ತವೆ.

## ಜಲಮೂಲಗಳು

'ಜಲಸಂಪತ್ತು' ಪ್ರಾಕೃತಿಕ ಸಂಪತ್ತಿನಲ್ಲಿ ಪ್ರಮುಖವಾಗಿದ್ದು, ಚಳ್ಳಕೆರೆ ತಾಲೂಕಿನಲ್ಲಿ ಹೆಸರಾಂತ ವೇದಾವತಿ ನದಿ ಹರಿಯುತ್ತಿದ್ದು, ಈ ಪರಿಸರವು ಬಯಲು ಸೀಮೆಯಾದ್ದರಿಂದ ಇಲ್ಲಿನ ಪ್ರಮುಖ ಜಲಸಂಪನ್ಮೂಲಗಳಾಗಿ ಕೆರೆಗಳು, ಬಾವಿಗಳು, ಕೊಳವೆಬಾವಿಗಳು ಕಾರ್ಯ ನಿರ್ವಹಿಸಿವೆ. ಪ್ರಾಚೀನ ಕಾಲದಿಂದಲೂ ನೀರಿನ ಆಸರೆಯಾಗಿ ಇಲ್ಲಿನ ಕೆರೆಗಳು ಪ್ರಮುಖ ಪಾತ್ರ ವಹಿಸಿರುವಂತೆ ಕಾಣುತ್ತದೆ.[೧೦] ಈ ಪ್ರದೇಶದಲ್ಲಿ ಅತ್ಯಂತ ದೊಡ್ಡದು ತಾಲೂಕಿನಲ್ಲಿ ಅತ್ಯಂತ ಹಳೆಯ ಕೆರೆಯಾದ ನಾಯಕನಹಟ್ಟಿ ಹಿರೆಕೆರೆ ಸುಮಾರು ೩೦೦ ವರ್ಷಗಳ ಹಿಂದೆ ಶ್ರೀ ಗುರು ತಿಪ್ಪೇರುದ್ರಸ್ವಾಮಿಯಿಂದ ನಿರ್ಮಿತವಾದದ್ದು.[೧೧] ಇವಲ್ಲದೆ ಈ ಹೋಬಳಿಯಲ್ಲಿ ಕಂಡುಬರುವ ಪ್ರಮುಖ ಕೆರೆಗಳು ದೇವರ ಮರಿಕುಂಟೆ ಕೆರೆ, ಅಜ್ಜನಕೆರೆ, ನಗರಂಗೆರೆಯ ಕೆರೆ, ಸಾಣಿಕೆರೆಯ ಕೆರೆ, ಹಳೇ ದೊಡ್ಡೇರಿಯ ಕೆರೆ, ರಾಣಿಕೆರೆ, ಚಿಕ್ಕಮಧುರೆಕೆರೆ ಮುಂತಾದವು ಕೂಡ ವ್ಯವಸಾಯಕ್ಕೆ ನೀರನ್ನು ಒದಗಿಸುವ ಪ್ರಮುಖ ಮೂಲಗಳಾಗಿದ್ದವೆಂದು ತಿಳಿದುಬರುತ್ತದೆ.

## ಪ್ರಾಣಿ ವರ್ಗ

ಈ ಪ್ರದೇಶದಲ್ಲಿ ಗುಂಡಾರಣ್ಯಗಳಿಲ್ಲದಿರುವ ಪ್ರಯುಕ್ತ ಇಲ್ಲಿ ಶುಷ್ಕ ವಾತಾವರಣದ ಕಾಡುಗಳಲ್ಲಿರುವಂತಹ ದ್ವಿತೀಯ ದರ್ಜೆಯ ಪ್ರಾಣಿಗಳು ಕಂಡುಬರುತ್ತವೆ. ಸಾಕುಪ್ರಾಣಿಗಳಾದ ದನ, ಕರು, ಎತ್ತು, ಎಮ್ಮೆ, ಕೋಣ ಹಾಗೂ ಕುರಿ, ಮೇಕೆಗಳನ್ನು ಸಾಕುತ್ತಾರೆ. ವಿಶೇಷವಾಗಿ ಮಾಂಸಹಾರಿ ಪ್ರಾಣಿಗಳಾದ ನರಿ, ತೋಳ, ಜೊಂಪು ತೋಳ, ಕತ್ತೆಕಿರುಬ, ಚಿಗರಿ ಮುಂತಾದವು

ಕಾಣುತ್ತವೆ. ಅದೇ ರೀತಿ ಸಸ್ಯಹಾರಿಗಳಾದ ಕರಡಿ, ಕಾಡುಹಂದಿ, ಮುಳ್ಳುಹಂದಿ, ದೊಡ್ಡ ಜಿಂಕೆ, ಮುಂಗುಸಿ, ಉಡ, ಮೊಲ, ನವಿಲು ಮುಂತಾದ ಪ್ರಾಣಿಗಳನ್ನು ಕಾಣಬಹುದು.

**ಖನಿಜ ಸಂಪತ್ತು**

ಈ ಪರಿಸರದ ಆರ್ಥಿಕ ರಂಗದ ಮೇಲೆ ಮಹತ್ತರವಾದ ಪ್ರಭಾವ ಬೀರುವ ಮತ್ತು ಲಾಭ ತರಬಹುದಾದ ಮುಖ್ಯ ಖನಿಜಗಳು ಈ ಪರಿಸರದಲ್ಲಿ ಹೇರಳವಾಗಿಲ್ಲ. ಕಣಶಿಲೆ ಮತ್ತು ವಿವಿಧ ವರ್ಣದ ಸುಣ್ಣದ ನಿಕ್ಷೇಪಗಳು ದೊರೆತಿವೆ. ದೊಡ್ಡೇರಿ ಪ್ರದೇಶದಲ್ಲಿ ಸುಣ್ಣದಕಲ್ಲು ಹೆಚ್ಚಾಗಿ ಸಿಗುವುದರಿಂದ ಈ ಸುಣ್ಣವನ್ನು ಚಳ್ಳಕೆರೆಯ ಬೇರೆ ಬೇರೆ ಪ್ರದೇಶಕ್ಕೆ ತೆಗೆದುಕೊಂಡು ಹೋಗಿ ಮಾರುವುದು ಕಂಡುಬರುತ್ತದೆ. ಅಲ್ಲಲ್ಲಿ ಕಬ್ಬಿಣದ ಅದಿರು ಸಹ ಕಂಡುಬರುತ್ತದೆ.

**೨.೨. ಪ್ರಾಗಿತಿಹಾಸ**

ಶಿಲಾಯುಗದ ಮಾನವನ ದೈನಂದಿನ ಚಟುವಟಿಕೆಗಳಲ್ಲಿ ಶಿಲೋಪಕರಣ ತಯಾರಿಕೆಯೂ ಒಂದು.[೨] ಆರಂಭದಲ್ಲಿ ಅಲೆಮಾರಿಯಾಗಿದ್ದ ಮಾನವನಿಗೆ ಗಡ್ಡೆ ಗೆಣಸುಗಳನ್ನು ಅಗೆದು ತೆಗೆಯಲು, ಗಿಡಗಳನ್ನು ಕಡಿಯಲು, ಬೇಟೆಯಾಡಲು, ಬೇಟೆಯಾಡಿದ ಪ್ರಾಣಿ ಮಾಂಸವನ್ನು ತುಂಡು ಮಾಡಲು, ಆಯುಧಗಳನ್ನು ತಯಾರಿಸಲು ಶಿಲೆ ಮಾನವನಿಗೆ ನೆರವಾಗಿದೆ. ಒಟ್ಟಿನಲ್ಲಿ ಅಂದು ಮಾನವನ ಜೀವನದ ಒಂದು ಭಾಗವಾಗಿ ಶಿಲೆ ಬಳಕೆಯಾಗುತ್ತಿತ್ತು.[೩]

ಪ್ರಾಗಿತಿಹಾಸ ಕಾಲದ ಜನಸಮುದಾಯ ದಿನನಿತ್ಯದ ಜೀವನದ ಉಪಯೋಗಕ್ಕೆ ಬಳಸಿ ಬಿಟ್ಟು ಹೋಗಿರುವಂತಹ ವಸ್ತುಗಳು ಮತ್ತು ಪದಾರ್ಥಗಳ ಆಧಾರದ ಮೇಲೆ ಪ್ರಾಗಿತಿಹಾಸವನ್ನು ನಾಲ್ಕು ಹಂತಗಳಾಗಿ ವಿಂಗಡಿಸಲಾಗಿದೆ.

೧. ಹಳೆಯ ಶಿಲಾಯುಗ(ಕ್ರಿ.ಪೂ. ೫೦೦,೦೦೦ ದಿಂದ ೧೦,೦೦೦ ವರ್ಷಗಳವರೆಗೆ)

೨. ಸೂಕ್ಷ್ಮ ಶಿಲಾಯುಗ(ಕ್ರಿ.ಪೂ. ೧೦,೦೦೦-೩,೦೦೦)

೩. ನೂತನ-ತಾಮ್ರ ಶಿಲಾಯುಗ(ಕ್ರಿ.ಪೂ. ೩,೫೦೦-೮೦೦)

೪. ಕಬ್ಬಿಣಯುಗ-ಬೃಹತ್ ಶಿಲಾಯುಗ(ಕ್ರಿ.ಪೂ. ೧,೦೦೦-೩೦೦)

**ಹಳೆಯ ಶಿಲಾಯುಗ:** ಮಾನವನ ಸಂಸ್ಕೃತಿ ಮೊದಲ ಹಂತವಾಗಿದ್ದು, ಪ್ರಕೃತಿಯಲ್ಲಿ ದೊರೆಯುತ್ತಿದ್ದ ಶಿಲೆಯಿಂದ ಆಯುಧ ತಯಾರಿಸಿಕೊಂಡು ಬೇಟೆ ಮತ್ತು ತನ್ನ ರಕ್ಷಣೆಗೆ ಬಳಸುತ್ತಿದ್ದ. ಹಾಗಾಗಿ ಹಳೆ ಶಿಲಾಯುಗದ ಇತಿಹಾಸದ ಬಗ್ಗೆ ಕರ್ನಾಟಕದಲ್ಲಿ ವಿಸ್ತೃತವಾದ ಅಧ್ಯಯನಗಳು ನಡೆದಿವೆ. ಕೃಷ್ಣ, ಕಾವೇರಿ, ತುಂಗ, ತುಂಗಭದ್ರಾ ಮತ್ತು ಅವುಗಳ ಉಪನದಿಗಳ ಪ್ರದೇಶದಲ್ಲಿ ಹಾಗೂ ಮಲಪ್ರಭಾ ನದಿ ತೀರ, ಕಿಬ್ಬನಹಳ್ಳಿ, ಹುಣಸಗಿ ಮುಂತಾದ ಪ್ರದೇಶಗಳಲ್ಲಿ ಹಳೇ ಶಿಲಾಯುಗಕ್ಕೆ ಸೇರಿದ ಕೈಕೊಡಲಿ, ಸೀಳುಗತ್ತಿ, ಮಚ್ಚುಗತ್ತಿ, ಕೊರಗ ಮುಂತಾದ ಪರಿಕರಗಳು ದೊರೆತಿವೆ.[೪]

ಚಿತ್ರದುರ್ಗ ಜಿಲ್ಲೆಗೆ ಸಂಬಂಧಿಸಿದಂತೆ ಹೊಳಲ್ಕೆರೆ ತಾಲೂಕಿನ ತಾಳ್ಯ, ಹೊಸದುರ್ಗ ತಾಲೂಕಿನ ಜಾನಕಲ್ಲು ಈ ಹಂತಕ್ಕೆ ಸೇರಿದ ಪ್ರಮುಖ ಸ್ಥಳಗಳು ಎಂದು ರಾಬರ್ಟ್‌ಬ್ರೂಸ್ ಫೂಟ್ ಅವರು ಪತ್ತೆ ಹಚ್ಚಿದ್ದಾರೆ.[೧೫]

ಮಧ್ಯ ಹಳೆ ಶಿಲಾಯುಗದಲ್ಲಿ ಸಾಂಪ್ರದಾಯಿಕ ಕೈಕೊಡಲಿ, ಮಚ್ಚುಗತ್ತಿ, ಹರೆಗತ್ತಿಗಳು ಹೆಚ್ಚಾಗಿ ಬಳಕೆಯಾಗಿದ್ದುದಲ್ಲದೆ ಚರ್ಟ್, ಜಾಸ್ಪರ್, ಅಗೇಟ್, ಕ್ವಾರ್ಟ್ಜ್ ಮೊದಲಾದ ಸುಧಾರಿತ ಶಿಲೆಗಳನ್ನು ಬಳಸಲಾಗಿದೆ. ಮಧ್ಯ ಹಳೆಯ ಶಿಲಾಯುಗಕ್ಕೆ ಸಂಬಂಧಿಸಿದ ಕಲ್ಲಿನ ಕೊಡಲಿ ಮತ್ತು ನೆಲೆಗಳನ್ನು ಇತ್ತೀಚೆಗೆ ಚಿತ್ರದುರ್ಗ ತಾಲೂಕಿನ ಕೂನಬೇವು, ಸಂಗೇನಹಳ್ಳಿಗಳಲ್ಲಿ ಎಸ್.ವೈ. ಸೋಮಶೇಖರ್, ಕೆ.ಎಸ್. ಶರತ್‌ಬಾಬು, ಹೊಸದುರ್ಗ ತಾಲೂಕಿನ ನಗರದಲ್ಲಿ ಎನ್.ಎಸ್. ಮಹಾಂತೇಶ್ ಪತ್ತೆ ಹಚ್ಚಿ ಪ್ರಕಟಿಸಿದ್ದಾರೆ.[೧೬]

ಚಳ್ಳಕೆರೆ ಕಸಬಾ ಹೋಬಳಿ ಹಳೆ ಶಿಲಾಯುಗಕ್ಕೆ ಸಂಬಂಧಿಸಿದಂತೆ ಕುರುಹುಗಳು ಮತ್ತು ನೆಲೆಗಳು ಕಂಡುಬಂದಿಲ್ಲ. ಆದರೆ ಈ ಪ್ರದೇಶದಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ಒಂದು ನೆಲೆ, ನೂತನ ಶಿಲಾಯುಗ ಸಂಸ್ಕೃತಿಯ ಮೂರು ನೆಲೆ, ಬೃಹತ್‌ಶಿಲಾಯುಗ ಸಂಸ್ಕೃತಿಯ ನಾಲ್ಕು ನೆಲೆಗಳು ಕಂಡುಬಂದಿವೆ. ಇವುಗಳಲ್ಲಿ ವಿವಿಧ ಹಂತದಲ್ಲಿ ವಿವಿಧ ಮಾದರಿಯ ಆಯುಧೋಪಕರಣಗಳು ದೊರೆತಿವೆ. ಇವರು ಆಯುಧವನ್ನು ರೂಪಿಸಲು ಕ್ವಾರ್ಟ್ಸ್ ಶಿಲೆಯನ್ನು ಬಳಸಿ ತಯಾರಿಸುವುದು ಈ ನೆಲೆಗಳಲ್ಲಿ ದೊರೆತ ಶಿಲಾಯುಧಗಳಿಂದ ತಿಳಿದುಬರುತ್ತದೆ.

**ಸೂಕ್ಷ್ಮ ಶಿಲಾಯುಗ:** ಹಳೆಯ ಶಿಲಾಯುಗ ಮತ್ತು ನೂತನ ಶಿಲಾಯುಗ ನಡುವಿನ ಸಾಂಸ್ಕೃತಿಕ ಹಂತವನ್ನು ಮಧ್ಯ ಶಿಲಾಯುಗವೆಂದು ಕರೆಯಲಾಗಿದೆ. ಹಳೆಯ ಶಿಲಾಯುಗಕ್ಕೆ ಹೋಲಿಸಿದರೆ ಸೂಕ್ಷ್ಮ ಶಿಲಾಯುಗದ ನೆಲೆಗಳು ಚಿತ್ರದುರ್ಗ ಜಿಲ್ಲೆಯಲ್ಲಿ ಸ್ವಲ್ಪ ಹೆಚ್ಚಾಗಿ ಕಂಡುಬಂದಿವೆ. ಎಂ.ಎಚ್. ಕೃಷ್ಣ ಮತ್ತು ಮಾರ್ಟಿಮರ್ ವ್ಹೀಲರ್ ಅವರು ಕೈಕೊಡಲಿ ಬ್ರಹ್ಮಗಿರಿ ಉತ್ಖನನದಲ್ಲಿ ಸೂಕ್ಷ್ಮ ಶಿಲಾಯುಗಗಳನ್ನು ಪತ್ತೆ ಹಚ್ಚಿ ಬೆಳಕಿಗೆ ತಂದಿದ್ದಾರೆ.[೧೭] ಈ ಆಯುಧಗಳನ್ನು ಅನುಸರಿಸಿ ಇಲ್ಲಿನ ಸಂಸ್ಕೃತಿಯನ್ನು ಕೃಷ್ಣ ಅವರು ರೊಪ್ಪ ಸಂಸ್ಕೃತಿಯೆಂದೇ ಹೆಸರಿಸಿದ್ದಾರೆ. ಇವುಗಳಲ್ಲದೆ ನುಂಕೆಮಲೆ, ಹಳೇಕೆರೆ, ಹಾನಗಲ್ಲು ಮೊದಲಾದೆಡೆ ಕಂಡುಬಂದಿವೆ. ಬ್ರಹ್ಮಗಿರಿಯಲ್ಲಿ ಜಾಸ್ಪರ್, ಅಗೇಟ್, ಕಾರ್ನೇಲಿಯನ್, ಕ್ರಿಸ್ಟಲ್ ಮೊದಲಾದ ಶಿಲೆಗಳನ್ನು ಬಳಸಿ ತಯಾರಿಸಿದ ೧೦೨ ಸೂಕ್ಷ್ಮ ಶಿಲಾಯುಗಗಳು ದೊರೆತಿವೆ. ಇವುಗಳಲ್ಲಿ ನೀಳಚಕ್ಕೆ, ಹರೆಯುವ ಚಕ್ಕೆ, ಮೊನೆ, ಕೊರೆಯುವಳಿ, ಅರ್ಧಚಂದ್ರಾಕೃತಿಯ ಹಾಗೂ ದಬ್ಬಳದಂತಹ ಕಿರುಗಾತ್ರದ ಆಯುಧಗಳು ಕಂಡುಬಂದಿವೆ.[೧೮] ಚಳ್ಳಕೆರೆ ಕಸಬಾ ಹೋಬಳಿ ಸೂಕ್ಷ್ಮ ಶಿಲಾಯುಗಕ್ಕೆ ಸಂಬಂಧಿಸಿದಂತೆ ಹಳೇ ದೊಡ್ಡೇರಿ ನೆಲೆಯಲ್ಲಿ ಕುರುಹುಗಳು ಕಂಡುಬಂದಿದೆ.

ಚಳ್ಳಕೆರೆ ತಾಲ್ಲೂಕಿನಿಂದ ೫ ಕಿ.ಮೀ. ದೂರದಲ್ಲಿರುವ ಗ್ರಾಮ ದೊಡ್ಡೇರಿ. ಪಕ್ಕದಲ್ಲಿರುವ ಇನ್ನೊಂದು ಗ್ರಾಮ ಡಿ. ಉಪ್ಪಾರಹಟ್ಟಿ, ಈ ಎರಡು ಗ್ರಾಮಗಳ ಮಧ್ಯೆ ಇರುವ ನೆಲೆಯೇ "ಹಳೇ ದೊಡ್ಡೇರಿ".

ನೆಲೆಯು ದೊಡ್ಡೇರಿಯ ದಕ್ಷಿಣಕ್ಕೆ ಒಂದು ಕಿಲೋಮೀಟರ್ ಡಿ. ಉಪ್ಪಾರಟ್ಟಿಯ ದಕ್ಷಿಣ ಮತ್ತು ಪೂರ್ವಕ್ಕೆ ಎರಡು ಫರ್ಲಾಂಗ್ ದೂರದಲ್ಲಿದೆ. ಕೆಂಪು, ಬೂದಿ, ಕಪ್ಪು, ಕಲ್ಲುಮಿಶ್ರಿತ ಕಪ್ಪುಮಣ್ಣು ಭೂಮಿಯಿದ್ದು ಅತಿ ಕಡಿಮೆ ಮಳೆ ಬೀಳುವ ಭೂಪ್ರದೇಶವಾಗಿದೆ.[೧೯]

**ಸೂಕ್ಷ್ಮ ಶಿಲಾಯುಗ:** ಈ ಸಂಸ್ಕೃತಿ ನೆಲೆಯಲ್ಲಿ ಮಾನವನು ಆಯುಧಗಳನ್ನು ತಯಾರಿಸಲು ಉಪಯೋಗಿಸುತ್ತಿದ್ದ ಕಚ್ಚಾ ವಸ್ತುಗಳು, ಕೋರ್‌ಗಳು ಮತ್ತು ಇನ್ನಿತರ ಅವಶೇಷಗಳು ದೊರೆತಿವೆ.[೨೦]

**ನವಶಿಲಾಯುಗ ಸಂಸ್ಕೃತಿ:** ಈ ನವಶಿಲಾಯುಗಕ್ಕೆ ಸಂಬಂಧಿಸಿದಂತೆ ಬ್ರಹ್ಮಗಿರಿ ಮತ್ತು ಚಂದ್ರವಳ್ಳಿ ನೆಲೆಗಳಲ್ಲಿ ಈ ಕಾಲದ ಕೊಡಲಿ, ಮಡಕೆ, ಅಸ್ಥಿ ಮೊದಲಾದ ಅವಶೇಷಗಳನ್ನು ಉತ್ಖನನದ ಮೂಲಕ ಗುರುತಿಸುವ ಕಾರ್ಯವನ್ನು ಎಂ.ಎಚ್. ಕೃಷ್ಣ ಮತ್ತು ಮಾರ್ಟಿಮರ್ ವೀಲರ್ ಮಾಡಿದ್ದಾರೆ. ಅವರು ಬ್ರಹ್ಮಗಿರಿಯಲ್ಲಿ ಕಂಡುಬಂದ ಈ ಕಾಲವನ್ನು ಉಜ್ಜಿ ನಯಗೊಳಿಸಿದ ನೂತನ ಶಿಲಾಕೊಡಲಿ ಸಂಸ್ಕೃತಿಯೆಂದು ಕರೆದರು.[೨೧]

ಚಳ್ಳಕೆರೆ ಕಸಬಾ ಹೋಬಳಿಯ ನವಶಿಲಾಯುಗದ ಕೆಲವು ನೆಲೆಗಳು ಕಂಡುಬಂದಿವೆ. ಅವುಗಳಲ್ಲಿ ವಡೇರಹಳ್ಳಿ, ದೊಡ್ಡೇರಿ, ಗಂಜಿಗುಂಟೆ, ಹಿರೇಮಧುರೆ ಮೊದಲಾದೆಡೆ ಕಲ್ಲಿನ ಕೊಡಲಿಗಳು, ಕವಣೆಗಳು, ಬೂದಿದಿಬ್ಬ, ಬೂದಬಣ್ಣದ ಮಡಕೆ, ಕುಡಿಕೆ ರೇಖಾಚಿತ್ರ ಮೊದಲಾದ ಅವಶೇಷಗಳು ಕಂಡುಬಂದಿವೆ.[೨೨]

**ನವಶಿಲಾಯುಗ:** ಈ ನವಶಿಲಾಯುಗದಲ್ಲಿ ಮಾನವ ಪಶುಪಾಲನೆ, ಕೃಷಿಯ ಆರಂಭ, ಆಯುಧಗಳ ಭಿನ್ನತೆ ಮತ್ತು ನಯಗಾರಿಕೆ, ಅಲೆಮಾರಿ ಜೀವನದಿಂದ ಗ್ರಾಮಜೀವನಕ್ಕೆ ಮಡಕೆಗಳ ತಯಾರಿಕೆ, ತಾಮ್ರದ ಬಳಕೆ ಹೀಗೆ ಹೊಸ ಹೊಸ ಆವಿಷ್ಕಾರಗಳನ್ನು ಕಂಡುಕೊಂಡ ಕಾಲವಿದು.[೨೩]

## ನವಶಿಲಾಯುಗ ಸಂಸ್ಕೃತಿಯ ಲಕ್ಷಣಗಳು: ಅವಶೇಷಗಳು

ಹಳೇ ದೊಡ್ಡೇರಿ ಗ್ರಾಮದಲ್ಲಿ ಬೂದು ಬಣ್ಣದ, ಬೂದುಮಿಶ್ರಿತ ಕಪ್ಪು ಬಣ್ಣದ, ಕೆಂಪು ಬಣ್ಣದ, ಕಪ್ಪು ಬಣ್ಣದ ಮಡಿಕೆಯ ಭಾಗಗಳು, ಕಂಠದ ಭಾಗಗಳು, ಬೂದು ಮಿಶ್ರಿತ ಮಡಿಕೆ ತುಂಡುಗಳು, ಕೆಂಪು ಬಣ್ಣದ ಕಲ್ಲುಗಳು, ನಯವಾದ ಮಡಿಕೆ ತುಣುಕುಗಳು, ದುಂಡಾದ ಸುಟ್ಟ ಮಣ್ಣಿನ ಬಿಲ್ಲೆಗಳು, ಅರೆಯುವ ಕಲ್ಲುಗಳು, ಕುಟ್ಟುವ ಕಲ್ಲುಗಳು, ಕಲ್ಲಿನ ಕೊಡಲಿಗಳು, ಹಾಳಾದ ಬೂದಿ ಎರೆಯುವ ಆಯುಧ (ಸ್ಕೇಪರ್ಸ್) ಈ ತರಹದ ಆಯುಧಗಳು ಗಂಜಿಗುಂಟೆ ನೆಲೆಯಲ್ಲಿ ಹಾಗೂ ಇನಾಂಗಾನ್ ಉತ್ಖನನದಲ್ಲಿ ದೊರಕಿದ್ದು ಹೋಲಿಕೆಯಿವೆ. ದುಂಡಾದ ಕಲ್ಲಿನ ಬಿಲ್ಲೆ ೪೧/೨ ಇಂಚು ಉದ್ದ, ೩೧/೨ ಇಂಚು ಅಗಲದ ಒಂದು ಇಂಚು ದಪ್ಪ, ೧೩ ಇಂಚು ಸುತ್ತಳತೆಯಿಂದ ಕೂಡಿರುವ ಗ್ರಾನೈಟ್ ಕಲ್ಲಿನ ಬಿಲ್ಲೆ ಸಿಕ್ಕಿದೆ. ಈ ತರಹದ ಬಿಲ್ಲೆ ಗಂಜಿಗುಂಟೆ ನೆಲೆಯಲ್ಲಿ ದೊರೆತಿದೆ. ರಾಬರ್ಟ್ ಬ್ರೂಸಿಪೂಟ್ ಅವರು ಬಳ್ಳಾರಿ ಕೋಟೆಯಲ್ಲಿ ಆಯುಧವನ್ನು ಪತ್ತೆ ಹಚ್ಚಿ "ಬಂಗಾರ ತಯಾರಕನ ಅಡಿಗಲ್ಲು" ಎಂದಿದ್ದಾರೆ. ಈ ತರಹದ ಅವಶೇಷಗಳು

ಗಂಜಿಗುಂಟೆಯಲ್ಲಿಯು ಸಹ ಕಂಡುಬರುತ್ತವೆ. ಚಚ್ಚೌಕಾರವಾಗಿರುವ ಕಲ್ಲಿನಾಯುಧ, ಚೆಣೆಕಲ್ಲು, ನಯಗೊಳಿಸುವ ಆಯುಧಗಳು ಇತ್ಯಾದಿಗಳು ದೊರಕಿವೆ. ಕರೀಕೆರೆ ಪ್ರದೇಶದಲ್ಲಿ ನೂತನ ಶಿಲಾಯುಗಕ್ಕೆ ಸೇರಿದ ಕುರುಹುಗಳನ್ನು ಪ್ರಪ್ರಥಮವಾಗಿ ಗುರುತಿಸಲಾಗಿದೆ.[೨೪]

**ಬೃಹತ್ ಶಿಲಾಯುಗ**

ಬೃಹತ್ ಶಿಲಾಯುಗದ ವೈಶಿಷ್ಟ್ಯವೆಂದರೆ ಸಮಾಧಿ ನಿರ್ಮಾಣ ಹಾಗೂ ಈ ಸಮಾಧಿಗಳಿಗೆ ಬೃಹದಾಕಾರದ ಬಂಡೆಗಳನ್ನು ಸೀಳಿ ಬಳಸಿರುವುದು ಬಂಡೆಕಲ್ಲುಗಳನ್ನು ಸೀಳುವ ಕಲೆ ಹಾಗೂ ಕಬ್ಬಿಣದ ಉಪಯೋಗ ಮೊಟ್ಟ ಮೊದಲ ಬಾರಿಗೆ ಮಾನವ ಜನಾಂಗಕ್ಕೆ ಪರಿಚಿತವಾದುದು ಇದೇ ಕಾಲದಲ್ಲಿ. ಆದ ಕಾರಣ ಈ ಕಾಲವನ್ನು ಕಬ್ಬಿಣ ಯುಗವೆಂದೂ ಕರೆಯಲಾಗುತ್ತದೆ.[೨೫] ಅಂದಿನ ಜನರಲ್ಲಿ ಇದ್ದ ಆಚರಣೆ, ನಂಬಿಕೆಗಳನ್ನು ಕಾಲದ ಶಿಲಾ ಸಮಾಧಿಗಳಲ್ಲಿ ಕಾಣಬಹುದು. ಇವರ ಕಾಲದ ಸಂಸ್ಕೃತಿಯ ಪ್ರಮುಖ ಸಂಕೇತಗಳೆಂದರೆ ಶಿಲಾಸಮಾಧಿಗಳೇ ಆಗಿವೆ. ಸತ್ತವರು ಅಥವಾ ಹಿರಿಯರ ಬಗೆಗೆ ಇದ್ದ ಗೌರವ, ನಂಬಿಕೆಗಳು ಹಾಗೂ ಸತ್ತ ವ್ಯಕ್ತಿ ಮರಳಿ ಭೂಮಿಗೆ ಬರುವನೆಂಬ ಆಶಯಗಳನ್ನು ಇವು ವ್ಯಕ್ತಪಡಿಸುತ್ತವೆ.[೨೬]

ಚಳ್ಳಕೆರೆ ಕಸಬಾ ಹೋಬಳಿಯ ಬೃಹತ್ ಶಿಲಾಸಂಸ್ಕೃತಿಯ ಕೆಲವು ನೆಲೆಗಳ ಅವಶೇಷಗಳು ಬೆಳಕಿಗೆ ಬಂದಿವೆ. ಅವುಗಳೆಂದರೆ ಮಧುರೆ, ಹಿರೇಮಧುರೆ ಮತ್ತು ದೊಡ್ಡೇರಿ ಎಂಬುವ ನೆಲೆಗಳನ್ನು ಗುರುತಿಸಲಾಗಿದೆ. ನೆಲೆಯಲ್ಲಿ ಕೆಂಪು, ಕಪ್ಪು, ಕೆಂಪು ಮತ್ತು ಕಪ್ಪು ಬಣ್ಣದ ಮಡಿಕೆಯ ಭಾಗಗಳು, ಕಂಠದ ಭಾಗಗಳು, ನೀರಿನ ಹೂಜಿಯ ಮೂತಿಗಳು, ಮಡಿಕೆಯ ಹಿಡಿ, ಚಿಕ್ಕದೀಪದ ಮುರಿದ ಭಾಗ, ಕಬ್ಬಿಣ ಕರಗಿಸಿದ ನಂತರ ಉಳಿಯು ಕಿಟ್ಟ, ಕಚ್ಚಾ ಕಬ್ಬಿಣದ ತುಂಡು, ಅರೆಯುವ ಕಲ್ಲುಗಳು, ಕಟ್ಟುವ ಕಲ್ಲುಗಳು, ಕವಣೆ ಕಲ್ಲುಗಳು, ಸುಟ್ಟ ಮಣ್ಣಿನ ದುಂಡಾದ ಬಿಲ್ಲೆಗಳು, ಪುಟ್ಟ ಮಣ್ಣಿನ ಮಣಿಗಳು, ಕಲ್ಲಿನ ಅರ, ಕಬ್ಬಿಣದ ತುಂಡು, ಮೂಳೆ ಭಾಗಗಳು, ಅಲಂಕಾರದ ಮಡಿಕೆ ಭಾಗಗಳು, ಸಮಾಧಿಗಳಲ್ಲಿ ಬಳಸುವ ಮಡಿಕೆ ಭಾಗಗಳು ಇನ್ನಿತರ ಅವಶೇಷಗಳು ದೊರಕಿವೆ.[೨೭]

ಬೃಹತ್ ಶಿಲಾಯುಗದ ಸಮಾಧಿ: ಚಳ್ಳಕೆರೆ ಕಸಬಾ ಹೋಬಳಿಗೆ ಒಳಪಡುವ ದೊಡ್ಡೇರಿಯು ಕನ್ನೇಶ್ವರ ದೇವಾಲಯದ ಸುತ್ತಮುತ್ತ ಹೇರಳವಾಗಿ ಮೂಳೆಗಳು, ಸಮಾಧಿಗಳಲ್ಲಿ ಬಳಸುವ ಕಲ್ಲಿನ ಭಾಗಗಳು, ದೊಡ್ಡ ಗಾತ್ರದ ಕೆಂಪು ಬಣ್ಣದ ಮಡಿಕೆ ಭಾಗಗಳು, ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆ ಭಾಗಗಳು, ಹಾಳಾದ ಸಮಾಧಿಯ ಕುರುಹುಗಳು ಕಂಡುಬರುತ್ತವೆ. ದೇವಾಲಯಕ್ಕೆ ಪೌಳಿ ಗೋಡೆಯನ್ನು ಕಟ್ಟಲು ಬುನಾದಿಯನ್ನು ತೆಗೆಯುವಾಗ ಚೀಲಗಟ್ಟಲೆ ಮೂಳೆಗಳು, ಹಲ್ಲಿನ ಭಾಗಗಳು, ತಲೆ ಬುರುಡೆಗಳು, ವಿವಿಧ ಬಣ್ಣಗಳ ಮಡಿಕೆಗಳು ಕಂಡುಬಂದಿವೆ. ಮಡಿಕೆ ತಯಾರಿಸುವ ಕಲೆಯನ್ನು ಕರಗತ ಮಾಡಿಕೊಂಡನೆಂದು ಹೇಳಬಹುದು.[೨೮]

ಇತಿಹಾಸ ಆರಂಭ ಕಾಲದ ಅವಶೇಷಗಳು: ಚಳ್ಳಕೆರೆ ಕಸಬಾ ಹೋಬಳಿಗೆ ಒಳಪಡುವ ದೊಡ್ಡೇರಿಯು ಇತಿಹಾಸ ಆರಂಭ ಕಾಲದ ಅವಶೇಷಗಳು ದೊರಕಿವೆ. ಅವುಗಳೆಂದರೆ, ಕೆಂಪು, ಕಪ್ಪು, ಕೆಂಪು ಮತ್ತು ಕಪ್ಪು ಬಣ್ಣದ ವಿವಿಧ ನಮೂನೆಯ ಮಡಿಕೆಯ ಭಾಗಗಳು ಹಾಗೂ ಬಿಳಿ, ಸೀಸ ಬಣ್ಣಗಳಿಂದ ಅಲಂಕಾರಗೊಳಿಸಿದ ಕ್ಯಾವಲಿನ್ ಪ್ಯಾಂಟೆಡ್ ರಸ್ಸೆಟ್ ಕೊಟೆಪ್ ಮಡಿಕೆ ಚೂರುಗಳು, ಸುಟ್ಟ ಮಣ್ಣಿನ ದುಂಡಾದ ಬಿಲ್ಲೆಗಳ, ಕಲ್ಲಿನ ಮಣಿಗಳು, ಚಿಕ್ಕ ಲಿಂಗ, ಸುಟ್ಟ ಮಣ್ಣಿನ ಬಸವ ಇನ್ನಿತರ ವಿವಿಧ ನಮೂನೆಯ ಅವಶೇಷಗಳು ದೊರಕಿವೆ.[೨೯]

## ೨.೩. ರಾಜಕೀಯ ಇತಿಹಾಸ

ಮಾನವನ ವಿಕಾಸದ ಹಂತದಲ್ಲಿ ಅಕ್ಷರಗಳ ಆವಿಷ್ಕಾರ ಬಹುಮುಖ್ಯವಾದ ಅಂಶವಾಗಿದೆ. ಅಕ್ಷರಗಳ ಆವಿಷ್ಕಾರದ ನಂತರದ ಹಂತವನ್ನು ಅಂದರೆ ಬರವಣಿಗೆಯು ಗೊತ್ತಾದ ಅವಧಿಯನ್ನು ಇತಿಹಾಸ ಕಾಲವೆಂದು ಕರೆಯಬಹುದು. ಈ ಪ್ರದೇಶದಲ್ಲಿ ಶಾಸನಗಳು, ದೊರೆಯುವ ಕಾಲದಿಂದ ಅಂದರೆ ಮೌರ್ಯರಿಂದ ಹಿಡಿದು ಚಿತ್ರದುರ್ಗ ಪಾಳೆಗಾರರ ಕಾಲದವರೆಗೂ ಆಳ್ವಿಕೆ ನಡೆಸಿದ ವಿವಿಧ ರಾಜವಂಶಗಳ ಪರಿಚಯವನ್ನು ಇಲ್ಲಿ ತಿಳಿಯಬಹುದು. ವಿವಿಧ ಕಾಲಘಟ್ಟಗಳಲ್ಲಿ ಕರ್ನಾಟವನ್ನಾಳಿದ ಪ್ರಮುಖ ರಾಜಮನೆತನಗಳ ಸಾಮ್ರಾಜ್ಯದೊಳಗೆ ಈ ಭಾಗವು ಸೇರಿತು. ಕೆಲವು ಆಡಳಿತ ವಿಭಾಗಗಳಿಂದಲೂ ಈ ವಿಷಯ ದೃಡಪಡುತ್ತದೆ. ಐತಿಹಾಸಿಕ ಹಿನ್ನೆಲೆಯನ್ನು ಹೊಂದಿರುವ ಈ ಪರಿಸರದಲ್ಲಿ ಹೊಯ್ಸಳರು, ವಿಜಯನಗರದ ಅರಸರು ಮತ್ತು ಹರತಿ ಪಾಳೆಯಗಾರರು ಹಾಗೂ ಚಿತ್ರದುರ್ಗ ಪಾಳೆಗಾರರು ಮತ್ತು ಮೈಸೂರು ಒಡೆಯರು ಹಾಗೂ ದೊಡ್ಡೇರಿ ಕದನ ಮತ್ತು ಇತ್ಯಾದಿ ಆಳ್ವಿಕೆಯನ್ನು ನಡೆಸಿದ್ದಕ್ಕೆ ಆಧಾರಗಳು ಸಿಗುತ್ತವೆ. ಇವರಲ್ಲಿ ಚಿತ್ರದುರ್ಗ ಪಾಳೆಗಾರರು ಪ್ರಮುಖರಾಗಿದ್ದಾರೆ.

### ಮೌರ್ಯರು

ಭಾರತದಲ್ಲಿ ಐತಿಹಾಸಿಕ ಯುಗದಲ್ಲಿ ಪ್ರಥಮ ಸಾಮ್ರಾಜ್ಯ ಈ ಮೌರ್ಯ ಸಾಮ್ರಾಜ್ಯ. ಮೌರ್ಯರು ಇಡೀ ಭಾರತವನ್ನು ಆಳ್ವಿಕೆ ಮಾಡಿದ್ದರಿಂದ ನಮ್ಮ ಕರ್ನಾಟಕದ ಬಹು ಭಾಗ ಇವರ ಸಾಮ್ರಾಜ್ಯದ ಆಳ್ವಿಕೆಗೆ ಒಳಪಟ್ಟಿತ್ತು. ದಕ್ಷಿಣ ಭಾರತವನ್ನು ಗೆದ್ದ ಮೌರ್ಯರು ಯಾರು ಎನ್ನುವುದು ನಮಗೆ ಸ್ಪಷ್ಟವಾಗಿ ತಿಳಿದಿಲ್ಲವಾದರೂ ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಆಳ್ವಿಕೆಯನ್ನು ಮಾಡಿರುವುದಕ್ಕೆ ಪುರಾವೆಗಳು ಸಿಕ್ಕಿವೆ.

ಮೌರ್ಯರು ತಮ್ಮ ಸಾಮ್ರಾಜ್ಯವನ್ನು ಕುಂತಲ ಸೀಮೆಯ ಭೀಮಾ ಮತ್ತು ವೇದಾವತಿ ನದಿಗಳ ಮಧ್ಯದಲ್ಲಿದ್ದು ಘಟ್ಟಗಳನ್ನು ಸರಹದ್ದುಗಳನ್ನಾಗಿ ಹೊಂದಿದ್ದು, ಇದರಲ್ಲಿ ಚಿತ್ರದುರ್ಗ ಜಿಲ್ಲೆಯ ಪ್ರದೇಶವು ಸೇರಿತ್ತೆಂಬುದಕ್ಕೆ ನಮಗೆ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ದೊರೆತ ಅಶೋಕನ ಶಾಸನಗಳು ಆಧಾರಗಳಾಗಿವೆ.[೩೦] ಕುಂತಲ ದೇಶವನ್ನು ಆಳಿದವರಲ್ಲಿ ನಂದರು ಮೊದಲಿಗರೆಂಬ ಅಭಿಪ್ರಾಯವಿದೆ. ಚಿತ್ರದುರ್ಗ ಅದರ ಸುತ್ತಲೂ ಇದ್ದ ಪ್ರದೇಶಗಳು ಕ್ರಿ.ಪೂ.

೬ನೆಯ ಶತಮಾನದಿಂದಲೂ ಔತ್ತರೇಯರ ಆಳ್ವಿಕೆಗೆ ಒಳಪಟ್ಟಿದ್ದವೆಂದು ಹೇಳಬಹುದು. ನಂದರು ಮೌರ್ಯರು ಅನುಕ್ರಮವಾಗಿ ಈ ಭಾಗದ ಒಡೆಯರಾದರು.

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ದೊರೆತಿರುವ ಅಶೋಕನ ಶಾಸನಗಳು ಮೌರ್ಯರ ಆಳ್ವಿಕೆಯನ್ನು ಅಧಿಕೃತವಾಗಿ ಸ್ಪಷ್ಟಪಡಿಸುವ ಆಧಾರಗಳಾಗಿವೆ. ಅಶೋಕನ ಎರಡು ಮತ್ತು ಹದಿಮೂರನೆಯ ಶಾಸನಗಳು ದಕ್ಷಿಣ ರಾಜ್ಯಗಳ ಹೆಸರುಗಳನ್ನು ತಿಳಿಸುತ್ತದೆ. ಅವು ಬ್ರಹ್ಮಗಿರಿಯ ಸಿದ್ದಾಪುರ, ಜಟಿಂಗ ರಾಮೇಶ್ವರದಲ್ಲಿ ಮೌರ್ಯ ಸಾಮ್ರಾಜ್ಯದ ಗಡಿಗಳನ್ನು ಸೂಚಿಸುವ ಗುರುತುಗಳಾಗಿವೆ ಎನ್ನಬಹುದು. ಚರಿತ್ರೆಕಾರರಾದ ಅ. ಸುಂದರ ಅವರ ಅಭಿಪ್ರಾಯ.[೩೧] ಇತ್ತೀಚೆಗೆ ನಡೆದ ಸಂಶೋಧನೆಗಳಿಂದ ಮೌರ್ಯ ಸಾಮ್ರಾಜ್ಯವು ಮೊಳಕಾಲ್ಮೂರು ತಾಲೂಕಿನ ಕೆಲವು ಭಾಗಗಳಲ್ಲದೆ ಜಿಲ್ಲೆಯ ಪೂರ್ಣಭಾಗವನ್ನು ಒಳಗೊಂಡಿದ್ದಾಗಿ ತಿಳಿದುಕೊಳ್ಳಬಹುದು. ಚಿತ್ರದುರ್ಗ ಮತ್ತು ಸುತ್ತಲಿನ ಪ್ರದೇಶಗಳು ಮೌರ್ಯ ಸಾಮ್ರಾಜ್ಯದ ಭಾಗವಾಗಿದ್ದುದರಿಂದ ಇವರ ಸಾಂಸ್ಕೃತಿಕ ಪರಂಪರೆಯಿಂದ ಈ ಜಿಲ್ಲೆಯ ಸುತ್ತಲೂ ಬೌದ್ಧ ಧರ್ಮದ ಸ್ಮಾರಕಗಳು ಮೌರ್ಯರ ಕಾಲದ ಕಲೆಯ ಅವಶೇಷಗಳು ಇಲ್ಲಿ ಹೆಚ್ಚಿನದಾಗಿ ಕಂಡುಬರುತ್ತವೆ.

ಬ್ರಹ್ಮಗಿರಿಯಲ್ಲಿ ಅಶೋಕನ ಶಾಸನಗಳು ೧೮೯೨ರಲ್ಲಿ ಬಿ.ಎಲ್. ರೈಸ್ ಕಂಡುಹಿಡಿದರು. ಅಶೋಕನು ಇಲ್ಲಿ ಈ ಮೂರು ಶಾಸನಗಳನ್ನು ಹಾಕಿಸಬೇಕಾದರೆ ಇದು ಮೌರ್ಯರ ಕಾಲದಲ್ಲಿ ಪ್ರಸಿದ್ಧ ಸ್ಥಳವಾಗಿರಬೇಕು. ಬ್ರಹ್ಮಗಿರಿ ಶಾಸನದ ಉಲ್ಲೇಖದಂತೆ ಸುವರ್ಣಗಿರಿಯ ಮೌರ್ಯ ಸಾಮ್ರಾಜ್ಯದ ದಕ್ಷಿಣ ರಾಜಧಾನಿಯಾಗಿದ್ದು ಅಲ್ಲಿದ್ದ ಆರ್ಯ ಪುತ್ರನು ಇಸಿಲ ಎಂಬ ಪ್ರಾಂತ್ಯದ ಮುಖ್ಯ ಪಟ್ಟಣದಲ್ಲಿದ್ದ ಮಹಾಮೌಲ್ಯನಿಗೆ ಸಂದೇಶವನ್ನು ಕಳುಹಿಸಿದನು. ಶಾಸನದಲ್ಲಿ ಉಲ್ಲೇಖಗೊಂಡಿರುವ 'ಇಸಿಲಾ' ಇಂದಿನ ಬ್ರಹ್ಮಗಿರಿಯೇ ಇರಬಹುದು ಎಂದು ಎಂ.ಎಚ್. ಕೃಷ್ಣರವರು ಊಹಿಸಿದ್ದಾರೆ. ಇದರಿಂದಾಗಿ ಚಿತ್ರದುರ್ಗ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳು ಅವರ ಆಳ್ವಿಕೆಗೆ ಒಳಪಟ್ಟಿದ್ದರಿಂದ ನಮ್ಮ ಚಳ್ಳಕೆರೆಯ ತಾಲ್ಲೂಕು ಆಳ್ವಿಕೆಗೆ ಒಳಪಟ್ಟಿದ್ದರಿಂದ ಚಳ್ಳಕೆರೆ ಕಸಬಾ ಹೋಬಳಿಯು ಸಹ ಇವರ ಅಧೀನಕ್ಕೆ ಒಳಪಟ್ಟಿತ್ತು

**ಶಾತವಾಹನರು**

ಮೌರ್ಯರು ನಂತರ ಕರ್ನಾಟಕವನ್ನು ಆಳಿದ ಮತ್ತೊಂದು ಮನೆತನವೆಂದರೆ ಶಾತವಾಹನರು. ಇವರು ಮೌರ್ಯರಿಗಿಂತ ಹೆಚ್ಚಾಗಿ ಕರ್ನಾಟಕದಲ್ಲಿನ ಪ್ರದೇಶಗಳಲ್ಲಿ ಆಳ್ವಿಕೆ ಮಾಡಿದ್ದಾರೆ. ಶಾತವಾಹನರು ತಮ್ಮನ್ನು 'ಕುಂತಲಸ್ವಾಮಿ ಮಗಳೆಂದು' ಕರೆದುಕೊಂಡಿದ್ದುಂಟು. ನಂತರ ಇವರಿಗೆ ಆಂಧ್ರರು, ಆಂಧ್ರ ಭೂತ್ರರು, ಶಾಲಿಕರ್ಣಿಗಳು ಎಂದು ಮುಂತಾದ ಹೆಸರುಗಳಿವೆ. ಸುಮಾರು ೪೫೦ ವರ್ಷಗಳ ಕಾಲ ಆಳಿದ ಈ ಸಾಮ್ರಾಜ್ಯದ ೩೦ ಮಂದಿ ರಾಜರುಗಳ ಬಗ್ಗೆ ಇದುವರೆಗೂ ದೊರೆತಿರುವ ಶಾಸನಗಳು ೩೦ಕ್ಕಿಂತ ಸ್ವಲ್ಪ ಜಾಸ್ತಿ ಇರಬಹುದು.

ಚಿತ್ರದುರ್ಗ ಶಾತವಾಹನರು ಆಳ್ವಿಕೆಗೆ ಸಂಬಂಧಪಟ್ಟಿದ್ದಾರೆ. ಇವರ ಶಾಸನಗಳು ಇಲ್ಲಿ ದೊರೆತಿಲ್ಲ. ಆದರೂ ಬ್ರಹ್ಮಗಿರಿ ಚಂದ್ರವಳ್ಳಿಗಳಲ್ಲಿ ಪುರಾತತ್ವ ಅವಶೇಷಗಳು ನಾಣ್ಯಗಳನ್ನು ಆಧರಿಸಿ ಇವರ ಆಳ್ವಿಕೆಯ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನ ಮಾಡಲಾಗಿದೆ.

ಚಂದ್ರವಳ್ಳಿಯಲ್ಲಿ ಭೂ ಉತ್ಖನನ ಮಾಡಿದ್ದರಿಂದ ಅನೇಕ ಸೀಸದ ನಾಣ್ಯಗಳು, ಇಟ್ಟಿಗೆ ಚೂರುಗಳು, ಕಟ್ಟಡದ ಅವಶೇಷಗಳು, ನಾನಾ ವಿದವಾದ ಮಣಿಗಳು, ಆಭರಣಗಳು, ಜಿಳಿ ಬಣ್ಣದ ರೇಖಾಚಿತ್ರದಿಂದ ಕೂಡಿದ ಮಣ್ಣಿನ ಪಾತ್ರೆಗಳು ದೊರೆತವು. ಈ ಪ್ರದೇಶದಲ್ಲಿ ಯಜ್ಞಶ್ರೀ ಶಾತಕರ್ಣಿಯ (ಕ್ರಿ.ಶ. ೧೭೪-೨೦೩) ಹೆಸರುಗಳ ನಾಣ್ಯ, ಶಾತಕರ್ಣಿಗಿಂತಲೂ ಹಿಂದಿನವನಾದ ಮಡನಂದನ ನಾಣ್ಯ ದೊರಕಿತು. ನಂತರ ಗೌತಮ ಪುತ್ರ ವಿಳವಾಯುಕುರ ಮಹಾರಥಿ, ಸದಕಣ, ಕಳವಾಯಿ ಮತ್ತು ರೋಮನ್ ಚಕ್ರವರ್ತಿಯಾದ ಅಗಸ್ಟಸ್‌ನ ನಾಣ್ಯಗಳು ದೊರಕಿದ್ದರಿಂದ ಕಾಲಗಣನೆಯನ್ನು ಪ್ರಯ್ನ ಮಾಡಲಾಯಿತು. ಬ್ರಹ್ಮಗಿರಿಯಲ್ಲಿ ಒಂದು ಚೈತ್ಯಾಲಯದಂತಿರುವ ಇಟ್ಟಿಗೆ ಕಟ್ಟಡ ಕಂಡುಬಂದಿದ್ದು, ಅದು ಶಾತವಾಹನರೆಂದು ತಿಳಿದುಬಂದಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ದೊರೆತ ಉತ್ತಮ ಜಾತಿಯ ಜಾಸ್ಪರ್, ಕಾರ್ನಿಲಿಯನ್, ಅಗೇಟ್ ಮುಂತಾದ ಶಿಲೆಗಳು, ಮಣಿಗಳು, ದಂತ, ಶಂಖ, ಸುಟ್ಟ ಮಣ್ಣಿನ ಗಾಜಿನ ನಾನಾ ಬಗೆಯ ಮಣಿಗಳು ಶಾತವಾಹನರ ಸಾಮಾಜಿಕ ಸಂಸ್ಕೃತಿಯನ್ನು ತಿಳಿಸುತ್ತವೆ.[೩]

ಚಂದ್ರವಳ್ಳಿಯಲ್ಲಿ ಡಾ.ಎಂ.ಎಚ್. ಕೃಷ್ಣರವರಿಗೆ ೩೦ಕ್ಕೂ ಹೆಚ್ಚು ನಾಣ್ಯಗಳು ದೊರಕಿವೆ. ಮಾರ್ಟಿಮರ್ ವ್ಹೀಲರ್‌ರವರಿಗೆ ೫೩ ನಾಣ್ಯಗಳು ಸಿಕ್ಕಿವೆ. ಇವುಗಳು ಬೆಳ್ಳಿ, ಸೀಸ, ತಾಮ್ರ, ಸತು, ತಾವರ ಮತ್ತು ಸೀಸ್ ಮಿಶ್ರಿತ ಲೋಹ ಮುಂತಾದವುಗಳಲ್ಲಿ ಟಂಕಿಸಿದ ನಾಣ್ಯಗಳು ಕಂಡುಬಂದಿರುವುದರಿಂದ ಅವರ ಆರ್ಥಿಕ ಪರಿಸ್ಥಿತಿಯನ್ನು ತಿಳಿಯಬಹುದು.

ಒಟ್ಟಾರೆ ಚಿತ್ರದುರ್ಗ ಜಿಲ್ಲೆ ಶಾತವಾಹನರ ಆಳ್ವಿಕೆಗೆ ಕ್ರಿ.ಶ. ಸುಮಾರು ೨೦೦ರ ನಂತರ ಈ ಜಿಲ್ಲೆಯ ಚಂದ್ರವಳ್ಳಿಯಲ್ಲಿ ತಮ್ಮ ವಾಸಸ್ಥಾನಕ್ಕೆ ಮತ್ತು ರಾಜಧಾನಿಗೆ ಒಳಪಡಿಸಿಕೊಂಡಿದ್ದರು ಎಂದು ಊಹೆಯನ್ನು ಮಾಡಬಹುದು. ಈ ರೀತಿಯಾಗಿ ಶಾತವಾಹನರ ಪ್ರಾಚೀನ ಅವಶೇಷಗಳು ದೊರಕಿರುವುದರಿಂದ ಚಳ್ಳಕೆರೆ ತಾಲ್ಲೂಕು ಕಸಬಾ ಹೋಬಳಿಯು ಸಹ ಇವರ ಆಡಳಿತಕ್ಕೆ ಒಳಪಟ್ಟಿರಬಹುದೆಂದು ತಿಳಿಯಬಹುದು.

**ಬನವಾಸಿ ಕದಂಬರು**

ಕರ್ನಾಟಕವನ್ನು ಆಳಿದ ಕನ್ನಡದ ಅರಸು ಮನೆತನವೆಂದರೆ ಬನವಾಸಿಯ ಕದಂಬರು. ಕರ್ನಾಟಕದಲ್ಲಿ ಮೌರ್ಯ ಮತ್ತು ಶಾತವಾಹನರ ಆಳ್ವಿಕೆಯ ನಂತರ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿದ ಕೀರ್ತಿ ಕದಂಬರಿಗೆ ಸಲ್ಲುತ್ತದೆ. ಕದಂಬರ ಸಾಮ್ರಾಜ್ಯಕ್ಕೆ ಒಳಪಟ್ಟ ಪ್ರದೇಶಗಳಲ್ಲಿ ಚಿತ್ರದುರ್ಗ ಜಿಲ್ಲೆಯೂ ಸೇರಿತ್ತು. ಕದಂಬ ವಂಶವು ಕ್ರಿ.ಶ. ೩ನೇ ಶತಮಾನದ ಅಂತ್ಯದಿಂದ ೭ನೆಯ ಶತಮಾನದ ಅಂತ್ಯದವರೆಗೆ ಸುಮಾರು ೩೭೫ ವರ್ಷಗಳ ಕಾಲ ಆಳ್ವಿಕೆಯನ್ನು ಮಾಡಿದರು. ಕದಂಬರ ಮೂಲ ಸ್ಥಾಪಕ ಮಯೂರಶರ್ಮ. ಇವನು ವಿದ್ಯಾಭ್ಯಾಸಕ್ಕೆಂದು ಪಲ್ಲವ ರಾಜ್ಯಕ್ಕೆ ಹೋದಾಗ ಅಲ್ಲಿ ತನಗಾದ ಅವಮಾನದ ಸೇಡು ತೀರಿಸಿಕೊಳ್ಳಲು ಪಲ್ಲವರೊಡನೆ ಹೋರಾಡಿ ಸ್ವತಂತ್ರವಾದ ರಾಜ್ಯ ಸ್ಥಾಪಿಸಿದ. ಇದರ ವಿವರಣೆ ತಾಳಗುಂದದ ಕಾಂತಿ ವರ್ಮನ ಶಾಸನದಲ್ಲಿ ತಿಳಿಸಿದೆ. ಮಯೂರಶರ್ಮನ ಕಾಲದಲ್ಲಿ ರಚನೆಯಾದಂತಹ ಶಾಸನಗಳು ಬೇರೆ

ಕಡೆ ದೊರೆಯದೆ ಇದ್ದರೂ ಚಿತ್ರದುರ್ಗದ ಚಂದ್ರವಳ್ಳಿಯ ಬಳಿ ಒಂದು ಎತ್ತರವಾದ ಬಂಡೆಯ ಮೇಲೆ ಅವನ ಶಾಸನ ಸಿಕ್ಕಿದೆ.[೩೩] ಇದು ಕದಂಬರ ಮೂಲ ಮತ್ತು ಮಯೂರಶರ್ಮನ ಸಾದನೆಯನ್ನು ತಿಳಿಸುತ್ತದೆ. ಬ್ರಾಹ್ಮಿಲಿಪಿ, ಪ್ರಾಕೃತ ಭಾಷೆಯಲ್ಲಿರುವ ಈ ಶಾಸನವು ಮಯೂರಶರ್ಮನು ಸೋಲಿಸಿದ ತ್ರೈಕೋಟಿ, ಅಭೀರ, ಪಲ್ಲವ, ಚಾರಿಯಾತ್ರಿ, ಶಾಕಸ್ಥಾನ, ಸಯಿಂದ್ರಕ, ಪುನ್ನಟ ಮತ್ತು ಮೌಖರಿ ರಾಜಮನೆತನಗಳನ್ನು ತಿಳಿಸುತ್ತದೆ. ಇದರಿಂದ ಕದಂಬರ ಕಾಲದಲ್ಲಿ ಈ ಜಿಲ್ಲೆ ವಿಶಿಷ್ಟವಾದ ಸ್ಥಾನ ಪಡೆದಿದೆ ಎಂಬುದರ ಆಧಾರವಾಗಿದೆ. ಈ ಶಾಸನ ಹಾಕಿಸಿರುವುದರ ಉದ್ದೇಶ ಅಲ್ಲಿ ಒಂದು ಕೆರೆಯನ್ನು ಕಟ್ಟಿಸಿದುದು ಮತ್ತು ಕದಂಬರ ಕಾಲದಲ್ಲಿ ಚಂದ್ರವಳ್ಳಿ ಪ್ರಮುಖ ಪಟ್ಟಣವಾಗಿದ್ದಿರಬೇಕೆಂದು ಈ ಶಾಸನದಿಂದ ತಿಳಿಯಬಹುದು. ಅಲ್ಲದೆ ಈ ಕಾಲಕ್ಕೆ ಸೇರುವ ಶಿವಲಿಂಗವೊಂದು ಚಂದ್ರವಳ್ಳಿಯಲ್ಲಿ ದೊರೆತಿದ್ದರೆ ವಿಷ್ಣು ಶಿಲ್ಪವೊಂದು ಚಿತ್ರದುರ್ಗ ತಾಲ್ಲೂಕಿನ ಹಾಯ್ಕಲ್‌ನಲ್ಲಿ ಕಂಡುಬಂದಿದೆ. ಇವುಗಳ ಆಧಾರದಿಂದ ಚಳ್ಳಕೆರೆ ತಾಲ್ಲೂಕು ಸಹ ಇವರ ಅಧೀನಕ್ಕೆ ಒಳಪಟ್ಟಿದಿರಬೇಕು.

## ಬಾದಾಮಿ ಚಲುಕ್ಯರು

ಈ ಪ್ರದೇಶದಲ್ಲಿ ನೇರವಾಗಿ ಬಾದಾಮಿ ಚಲುಕ್ಯರಿಗೆ ಸಂಬಂಧಿಸಿದ ಶಾಸನಗಳು ದೊರೆಯದೇ ಹೋದರೂ ಪರೋಕ್ಷವಾಗಿ ಅವರ ರಾಜಕೀಯ ಪ್ರಭಾವ ಈ ಪ್ರದೇಶದ ಮೆಲಿದ್ದಿತು. ಇದರಿಂದಾಗಿ ಈ ಪ್ರದೇಶವು ಕದಂಬ ಚಾಲುಕ್ಯರ ಸಾಂಸ್ಕೃತಿಕ ಪ್ರದೇಶವಾಗಿತ್ತು ಎಂದು ಹೇಳಬಹುದು. ಕ್ರಿ.ಶ. ೬ನೆ ಶತಮಾನದ ಆದಿ ಭಾಗದಿಂದ ಕ್ರಿ.ಶ. ೭೫೭ರವರೆಗೆ ಆಳ್ವಿಕೆ ನಡೆಸಿದ ಇವರು ಕರ್ನಾಟಕ ಇತಿಹಾಸಕ್ಕೆ ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಮಹತ್ತರವಾದ ಕಾಣಿಕೆಗಳನ್ನು ನೀಡಿದ್ದಾರೆ. ಇದೇ ಸಂದರ್ಭದಲ್ಲಿ ದಕ್ಷಿಣದಲ್ಲೂ ಏಳಿಗೆಗೆ ಬಂದ ಕಂಚಿಯ ಪಲ್ಲವರಿಗೂ, ಮಧುರೆಯ ಪಾಂಡ್ಯರಿಗೂ, ಬಾದಾಮಿ ಚಲುಕ್ಯರಿಗೂ ಆಗಾಗ ಘರ್ಷಣೆಗಳು ಸಂಭವಿಸಿದ್ದವು. ಚಳ್ಳಕೆರೆ ತಾಲ್ಲೂಕಿನಲ್ಲಿ ದೊರಕುವ ಎರಡು ಶಾಸನಗಳಿಂದ ೩ನೇ ಜಯಸಿಂಹನು ಕೊಡ್ಡಾ, ಶಿರಾ, ನೊಳಂಬವಾಡಿ, ಕದಂಬಳಿಗೆ ಮುಂತಾದ ಪ್ರಾಂತ್ಯಗಳನ್ನು ಆಳುತ್ತಿದ್ದನೆಂದು ತೋರುತ್ತದೆ.[೩೪] ಕ್ರಿ.ಶ. ೧೧೫೫ರಿಂದ ಕ್ರಿ.ಶ. ೧೧೮೫ರವರೆಗಿನ ಕಾಲಾವಧಿಯಲ್ಲಿ ವಿಜಯ ಪಾಂಡ್ಯನು ಮಹಾಮಂಡಲೇಶ್ವರನಾಗಿ ಉಚ್ಚಂಗಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ನೊಳಂಬವಾಡಿಯನ್ನಾಳುತ್ತಿದ್ದನೆಂದು ಆ ಕಾಲದ ಶಾಸನಗಳಲ್ಲಿ ಹೇಳಲಾಗಿದೆ.

## ರಾಷ್ಟ್ರಕೂಟ

ಬಾದಾಮಿ ಚಾಲುಕ್ಯರ ನಂತರ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ರಾಷ್ಟ್ರಕೂಟರ ಬಲಿಷ್ಠ ರಾಜಮನೆತನದವರಾಗಿದ್ದರು. ಸುಮಾರು ೨ನೇ ಶತಮಾನಗಳ ಕಾಲ ವಿಶಾಲ ಸಾಮ್ರಾಜ್ಯವನ್ನಾಳಿದ ರಾಷ್ಟ್ರಕೂಟರು ಕರ್ನಾಟಕದಲ್ಲಿ ಪ್ರಸಿದ್ಧರಾಗಿದ್ದಾರೆ. ಇವರ ಸಾಮ್ರಾಜ್ಯ ಎತ್ತರದಲ್ಲಿ ನರ್ಮದಾ ನದಿಯಿಂದ ದಕ್ಷಿಣದಲ್ಲಿ ಕಾವೇರಿಯವರೆಗೂ ಪಶ್ಚಿಮದಲ್ಲಿ ಅರಬ್ಬಿ ಸಮುದ್ರ ಮತ್ತು ಮಾಳವದಿಂದ ಪೂರ್ವದಲ್ಲಿ ಆಂಧ್ರಪ್ರದೇಶ, ವಾರಂಗಲ್ ಮತ್ತು ಕಡಪ ಜಿಲ್ಲೆಗಳವರೆಗೂ ವಿಸ್ತರಿಸಿಕೊಂಡಿತ್ತು.

ಇಂತಹ ವಿಶಾಲ ಸಾಮ್ರಾಜ್ಯವನ್ನು ಸ್ಥಾಪಿಸಿ ಕನ್ನಡ ಸಂಸ್ಕೃತಿ, ನಾಡುನುಡಿಗಳಿಗೆ ರಾಷ್ಟ್ರಕೂಟರು ನೀಡಿದ ಕೊಡುಗೆ ಅಮೋಘವಾದುದು. ಇವರು ಸಹ ಚಾಲುಕ್ಯರಂತೆ ಉತ್ತಮ ಹಾಗೂ ನೊಳಂಬರೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿದ್ದು, ಪ್ರಸ್ತುತ ಪ್ರದೇಶದಲ್ಲಿ ಇವರ ಅನೇಕ ಶಾಸನಗಳು, ವೀರಗಲ್ಲುಗಳು ಹಾಗೂ ಇನ್ನಿತರ ಅವಶೇಷಗಳು ದೊರೆಯುತ್ತಿವೆ.[೩೫]

ಪ್ರಸ್ತುತ ಅಧ್ಯಯನ ಪ್ರದೇಶದಲ್ಲ ೩ನೇ ಗೋವಿಂದನ ಹಲವು ಶಾಸನಗಳು ದೊರಕಿವೆ. ಎರಡನೇ ಗೋವಿಂದನ ಕಾಲಕ್ಕೆ ಸೇರಿದ ಚಳ್ಳಕೆರೆಯ ಎರಡು (ಚಳ್ಳಕೆರೆ ೩೩-೩೪ ಶಾಸನಗಳು) ೫೩ ಶಾಸನಗಳಿಂದ ರಾಷ್ಟ್ರಕೂಟರ ಆಳ್ವಿಕೆ ದಕ್ಷಿಣದಲ್ಲಿ ವಿಶೇಷ ಪ್ರಭಾವವನ್ನು ಬೀರಿದ್ದುದು ನಮಗೆ ಕಂಡುಬರುತ್ತದೆ.[೩೬]

## ನೊಳಂಬರು

ಪ್ರಸ್ತುತ ಪ್ರದೇಶದಲ್ಲಿ ಹಲವು ಶತಮಾನಗಳವರೆಗೆ ಗಂಗ, ಚಾಲಕ್ಯ, ಚೋಳ ಮತ್ತು ಹೊಯ್ಸಳರ ಮಹಾಸಾಮಂತರಾಗಿ ಆಳಿದ ನೊಳಂಬರು ಅಪಾರ ಖ್ಯಾತಿವೆತ್ತ ಸಾಮಂತ ಕುಲದವರು. ಇವರು ಆಳುತ್ತಿದ್ದ ಈ ಜಿಲ್ಲೆಯ ಪ್ರದೇಶಗಳನ್ನೊಳಗೊಂಡ ಸೀಮೆಗೆ 'ನೊಳಂಬವಾಡಿ' ಅಥವಾ 'ನೊಳಂಬವಾಡಿ ೩೨೦೦೦' ನಾಡು ಎಂದು ಹೆಸರಿದ್ದಿತು.[೩೭] ಕ್ರಿ.ಶ. ೮ನೆಯ ಶತಮಾನದಲ್ಲಿ 'ನೊಳಂಬಾಳಿಗೆ ಸಾಸಿರ' ಎಂಬ ಚಿಕ್ಕ ಪ್ರಾಂತ್ಯದ ಅಧಿಪತಿಗಳಾಗಿ ಆಳ್ವಿಕೆ ಪ್ರಾರಂಭಿಸಿದರು. ಉತ್ತರದಲ್ಲಿ ಬಳ್ಳಾರಿ ಜಿಲ್ಲೆ ಪೂರ್ವದಲ್ಲಿ ಆಂಧ್ರಪ್ರದೇಶ ಅನಂತಪುರ ಜಿಲ್ಲೆ, ಆಗ್ನೇಯದಲ್ಲಿ ತುಮಕೂರು ಜಿಲ್ಲೆ, ನೈರುತ್ಯದಲ್ಲಿ ಚಿಕ್ಕಮಗಳೂರು ಜಿಲ್ಲೆ, ಪಶ್ಚಿಮದಲ್ಲಿ ಶಿವಮೊಗ್ಗ ಜಿಲ್ಲೆ ಇವುಗಳ ನಡುವೆ ಚಿತ್ರದುರ್ಗ, ಹಿರಿಯೂರು, ಜಗಳೂರು, ಚಳ್ಳಕೆರೆ, ಮೊಳಕಾಲ್ಮೂರು ತಾಲೂಕುಗಳನ್ನು ಒಳಗೊಂಡ ನೊಳಂಬ ಪ್ರಾಂತ್ಯವಿತ್ತು. ಚಳ್ಳಕೆರೆ ತಾಲ್ಲೂಕಿಗೆ ಸೇರಿದ ಚಿಕ್ಕಮಧುರೆ ಮತ್ತು ಹಿರೇಮಧುರೆ ಇವರ ಕಾಲದ ಪ್ರಮುಖ ಗ್ರಾಮಗಳಾಗಿದ್ದವು.[೩೮]

ಕ್ರಿ.ಶ. ೮೧೦ಕ್ಕೆ ಸಂಬಂಧಿಸಿದ ದೊಡ್ಡ ಉಳ್ಳಾರ್ಥಿ ಬಳಿಯಲ್ಲಿನ ಮೂರು ವೀರಗಲ್ಲುಗಳು ಸಿಂಹಪೋತಕಲಿ ನೊಳಂಬಾಡಿ ರಾಜನು ನೊಳಂಬವಾಡಿಯನ್ನು ಆಳುತ್ತಿದ್ದನೆಂದು ತಿಳಿಸುವವು. ಮೊದಲನೆಯ ವೀರಗಲ್ಲು ಶಾಸನ[೩೯] ಓರ್ವ ಮುಖಂಡನ ಸಾವನ್ನು ತಿಳಿಸುತ್ತದೆ. ಎರಡನೆಯ ವೀರಗಲ್ಲು ಶಾಸನ[೪೦] ಮಡಿದ ವೀರರ ಸಂಬಂಧಿಕರಿಗೆ ಭೂದತ್ತಿ ನೀಡಿದನ್ನು ತಿಳಿಸುತ್ತದೆ. ಮೂರನೆಯ ವೀರಗಲ್ಲು[೪೧] ಪೆರ್ಮಾಡಿ, ಪ್ರಾಯಶಃ ಗಂಗರಾಜ ಇಮ್ಮಡಿ ಶಿವಮಾರನು ದುಗ್ಗಮರಸಿನೊಂದಿಗೆ ಕ್ರೋಧ ತಾಳಿ ಆತನನ್ನು ಸೆದೆಬಡಿಯುವಂತೆ ಸಿಂಹಪೋತನಿಗೆ ಆಜ್ಞೆ ಮಾಡಿದುದನ್ನು ಸಿಂಹಪ್ರೋತನು ಶಿವಮಾರನ ಆಜ್ಞೆಯಂತೆ ಹೋರಾಟ ನಡೆಸಿದುದನ್ನು ತಿಳಿಸುತ್ತದೆ.

ಚಳ್ಳಕೆರೆ ತಾಲ್ಲೂಕು ಓರೇಮಧುರೆ ಗ್ರಾಮದ ಕ್ರಿ.ಶ. ೮೫೦ ಸೇರಬಹುದಾದ ಶಿಥಿಲವಾದ ದಾನಶಾಸನ[೪೨] ಕೆರೆಯ ಉಸ್ತುವಾರಿಯನ್ನು ನೋಡಿಕೊಳ್ಳಲು ಭೂಮಿಯನ್ನು ದಾನ ಮಾಡಿ ರಕ್ಷಿಸುವಂತೆ ಹೇಳಿದ. ಕ್ರಿ.ಶ. ೮೧೫ರ ಕಾಲಕ್ಕೆ ಸಂಬಂಧಿಸಿದ ಚಿಕ್ಕಮಧುರೆ ಮಲ್ಲೇಶ್ವರ ದೇವಾಲಯದ ಪ್ರಾಂಗಣದಲ್ಲಿರುವ ಸ್ತಂಭಶಾಸನಗಳು ಸಿಂಗಾಪೋತನ ಮಗ ಪರಮೇಶ್ವರ

ಪಲ್ಲವಧಿರಾಜ ಮತ್ತು ಅವನ ಮಗ ಪಲ್ಲಮಲ್ಲ ಇವರು ರಾಷ್ಟ್ರಕೂಟರ ಸಾಮಂತರಾಗಿ ಕೆಲವು ನಾಡುಗಳ ಆಡಳಿತ ನಡೆಸುತ್ತಿದ್ದರೆಂದು ತಿಳಿಸುವುದು.[೪೩] ಮಲ್ಲೇಶ್ವರ ದೇವಾಲಯದಲ್ಲಿರುವ ಮೊದಲನೆಯ ಸ್ತಂಭ ಶಾಸನವು[೪೪] ಜಗತ್ತುಂಗ ಪ್ರಭು ವರ್ಷ ಪ್ರತಾಪವಲೋಪ ಶ್ರೀ ವಲ್ಲಭ ತನ್ನ ಚಕ್ರಾಧಿಪತ್ಯವನ್ನಾಳುತ್ತಿರಲು ಪರಮೇಶ್ವರ ಪಲ್ಲವಾದಿ ನೊಳಂಬಾಳಿಗೆ ೧೦೦೦ ಮತ್ತು ನಿರ್ಗುಂದ ೩೦೦ ನಾಡುಗಳನ್ನು ಸಾಮಂತನಾಗಿ ಆಳುತ್ತಿದ್ದು, ಪರಮೇಶ್ವರನ ರಾಶಿ ಗಾವನಗಬ್ಬೆ ಸಂಕ್ರಾಂತಿಯಂದು ವಿಷ್ಣುವನ್ನು ಭಜಿಸಿದುದನ್ನು ಮತ್ತು ನಾಗಮಾರಬ್ಬೆ ಸಂಕ್ರಾಂತಿಯಂದು ವಿಷ್ಣುವನ್ನು ಭಜಿಸಿದುದನ್ನು ಮತ್ತು ನಾಗಮಾರಬ್ಬೆ (ಪ್ರಾಯಶಃ ಪರಮೇಶ್ವರನ ಮತ್ತೊಬ್ಬ ರಾಣಿ) ಶಿವಾಲಯಕ್ಕೆ ನೀಡಿದ ಭೂದತ್ತಿಯನ್ನು ತಿಳಿಸುವುದು. ಇದೇ ಶಾಸನದಿಂದ ಸಿಂಗಪೋತನ ಓರ್ವ ಮಗಳು ಪರಮೇಶ್ವರನ ಪಲ್ಲವ ರಾಜನ ಸೋದರಿ ಗಂಗ ಪೆರ್ಮಾಡಿಯ ರಾಣಿಯಾಗಿದ್ದಳೆಂದು ತಿಳಿದುಬರುವುದು.[೪೫]

ಚಿಕ್ಕಮಧುರೆ ಮಲ್ಲೇಶ್ವರ ದೇವಾಲಯದ ಎರಡನೆಯ ಸ್ತಂಭಶಾಸನವು[೪೬] ಸಮಸ್ತ ಲೋಕಪ್ರಸಿದ್ಧಿ ಪಲ್ಲವಾದಿ ರಾಜ ರಾಷ್ಟ್ರಕೂಟ ಮಹಾಸಾಮಂತನಾಗಿ ನೊಳಂಬಳಿಗೆ–೧೦೦೦, ನೀರ್ಗುಂದನಾಡು–೩೦೦, ಇರುಗಲ್ವಾಡಿ–೩೦೦, ಗಂಗವೂರು –೩೨, ನೆಲ್ಲಗುಂಡ–೧೨ ಆಳುತ್ತಿರುವಾಗ ಅವನ ಪ್ರಾಯತ್ಯಾಜ (ಮಗ) ಪಲ್ಲವಮಲ್ಲನು ಮದಕರಿಕಲ್ಲು, ತೋಣ್ಣೂರು, ಮಾಲ್ದೆ–೧೨, ಕೋಳೂರು–೧೨, ಗಂಗವೂರು–೩೦ ಆಳುತ್ತಿದ್ದ. ಆತನ ತಾಯಿ ಗಾವನಗಬ್ಬೆ ಮದರಿಕಲ್ಲಿನ ಗವಗಣೇಶ್ವರ ಎಂಬ ಶಿವಾಲಯವನ್ನು ಮಾಡಿಸಿ, ಆ ದೇವಾಲಯಕ್ಕೆ ಕಿರಿಯ ಮದರಿಕಲ್ಲಿನ ಮತ್ತರು ಸಾಗುವಳಿ ಭೂಮಿಯನ್ನು ಎಂಟು ಮತ್ತರು ಭೂಮಿಯನ್ನು ದಾನ ಮಾಡಿರುವುದನ್ನು ಉಲ್ಲೇಖಿಸಿದೆ.

ಕ್ರಿ.ಶ. ೮೫೦ರ ಚಳ್ಳಕೆರೆ ತಾಲೂಕಿನ ಶಾಸನವು[೪೭] ಪಲ್ಲವ ಚೋರ ಎಂಬ ರಾಜನ ವಿಷಯ ತಿಳಿಸುವುದು. ಈತನ ಹೆಂಜೇರುವಿನ ಶಾಸನದಲ್ಲಿ ತಿಳಿಸಿರುವ ಪೊಳಲ್ಚೋರ ನೊಳಂಬನೆಂಬುವುದರಲ್ಲಿ ಸಂಶಯವಿಲ್ಲ. ಮೇಲಿನ ವಿವರಗಳಿಂದ ನೊಳಂಬರು ಈ ಪ್ರದೇಶದಲ್ಲಿ ಅಧಿಪತ್ಯ ಸ್ಥಾಪಿಸಿದ್ದರೆಂದು ತಿಳಿದುಬರುತ್ತದೆ.

ಚಳ್ಳಕೆರೆಯ ೩೩, ೩೪ನೇ ಶಾಸನದಲ್ಲಿ ನೊಳಂಬ ರಾಜನಾದ ಚಾರುಪೊನ್ನೇರನು ಜಗತ್ತುಂಗ ಪ್ರಬೂತವರ್ಷ ಗೋವಿಂದನ ಸಾಮಂತನಾಗಿ ಬಾಳಿದ್ದನ್ನು ಬರೆದಿದೆ. ಹೀಗಾಗಿ ಈ ಪ್ರದೇಶದಲ್ಲಿ ರಾಷ್ಟ್ರಕೂಟರ ಪರೋಕ್ಷ ಆಳ್ವಿಕೆಯನ್ನು ಗಮನಿಸಬಹುದು.

### ಕಲ್ಯಾಣ ಚಾಲುಕ್ಯರು

ಕಲ್ಯಾಣದ ಚಾಲುಕ್ಯರು ಸುಮಾರು ಕ್ರಿ.ಶ. ೧೦ನೇ ಶತಮಾನದಿಂದ ೧೨ನೇ ಶತಮಾನದವರೆಗೆ ದಕ್ಷಿಣ ಭಾರತದ ಇತಿಹಾಸದಲ್ಲಿ ವಿಶೇಷವಾಗಿ ಕರ್ನಾಟಕ ಇತಿಹಾಸದಲ್ಲಿ ಮಹತ್ತರವಾದ ಪಾತ್ರವಹಿಸಿದ್ದಾರೆ. ಕರ್ನಾಟಕದುದ್ದಕ್ಕೂ ಆಳ್ವಿಕೆ ನಡೆಸಿ ಹಲವಾರು ದೇವಾಲಯಗಳನ್ನು ನಿರ್ಮಿಸಿದ್ದಾರೆ. ಅಲ್ಲದೆ ದಾನದತ್ತಿಗಳನ್ನು ಯುದ್ಧದ ಸನ್ನಿವೇಶಗಳನ್ನು ವಿವರಿಸುವಂತಹ ಅನೇಕ

ಶಾಸನಗಳನ್ನು ರಚಿಸಿದ್ದಾರೆ. ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲೂಕಿನಲ್ಲಿರುವ ಬಾಗಳಿ ಕಲ್ಲೇಶ್ವರ ದೇವಾಲಯ, ನೀಲಗುಂದ ಭೀಮೇಶ್ವರ, ನದಿ ತಾವರೆಯ ಅಮೃತ ಮಾಣಿಕೇಶ್ವರ ದೇವಾಲಯ ಇತ್ಯಾದಿ ದೇವಾಲಯಗಳು ಇವರ ಕಾಲಾವಧಿಯಲ್ಲಿ ನಿರ್ಮಾಣವಾಗಿರುವುದನ್ನು ನೋಡುತ್ತೇವೆ.

ಕಲ್ಯಾಣದ ಚಾಲುಕ್ಯರಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಪಡೆದ ಅರಸರುಗಳೆಂದರೆ ಎರಡನೇ ಜಯಸಿಂಹ, ಸೋಮೇಶ್ವರ, ವಿಕ್ರಮಾದಿತ್ಯ ಇತ್ಯಾದಿ ಅರಸರು ಕಲ್ಯಾಣದ ಚಾಲುಕ್ಯರಿಗೆ ಸಂಬಂಧಿಸಿದ ಶಾಸನಗಳು ಮತ್ತು ವೀರಗಲ್ಲುಗಳು ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ವಿರಳವಾಗಿದ್ದರೂ ಇವರಿಗೆ ಸಂಬಂಧಿಸಿದ ಕೆಲವೇ ಶಾಸನಗಳು, ವೀರಗಲ್ಲುಗಳಿಂದ ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ಇವರ ಆಳ್ವಿಕೆಯು ನಂಟು ಇದ್ದುದು ಸ್ಪಷ್ಟವಾಗುತ್ತದೆ.[೪೮]

ಪ್ರಸ್ತುತ ಈ ಪ್ರದೇಶದಲ್ಲಿ ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಆರಂಭದ ದಿನಗಳನ್ನು ಪರಿಚಯಿಸಿಕೊಳ್ಳಲು ಚಿತ್ರದುರ್ಗ ಜಿಲ್ಲೆಯಲ್ಲಿ ದೊರೆತಿರುವ ಶಾಸನಗಳು ಬಹುಮುಖ್ಯ ಆಕರಗಳಾಗಿವೆ. ಚಳ್ಳಕೆರೆ ತಾಲ್ಲೂಕಿನ ಮಹದೇವಪುರದ ಶಾಸನದ[೪೯] ಪಠ ಸರಿಯಾಗಿಲ್ಲದಿದ್ದರೂ ಅದು ತ್ರಿಭುವನ ಮಲ್ಲನ ಹೆಸರನ್ನು ಉಲ್ಲೇಖಿಸಿದೆ ಮತ್ತು ಉಲ್ಲೇಖಿತ ಕಾಲವಾದ ಕ್ರಿ.ಶ. ೧೧೦೮ ಅವರ ಆಳ್ವಿಕೆಯ ಕಾಲಕ್ಕೆ ಸರಿಹೊಂದುತ್ತದೆ. ಈ ಶಾಸನದಲ್ಲಿ ಬರೆಯಲಾದ ಪುರವರಾಧೀಶ್ವರ ಕರಿಕಾಲ ಚೋಳಕುಲವನ್ನು ಹೆಸರಿಸಿ, ತ್ರಿಭುವನ ಮಲ್ಲ, ಮಲ್ಲದೇವಚೋಳ ಮಹಾರಾಜನು ಭಂಡಾರಿ ಕೇತಣನಿಗೆ ಮೂಲಿಗೆ ವೃತ್ತಿಯಾಗಿ ಕೊಟ್ಟ ವಿವರಗಳನ್ನು ದಾಖಲಿಸಿದೆ.

**ಹೊಯ್ಸಳರು**

ಕ್ರಿ.ಶ. ೧೧ನೆಯ ಶತಮಾನದಿಂದ ೧೪ನೆಯ ಶತಮಾನದವರೆಗೆ ಆಳ್ವಿಕೆ ನಡೆಸಿದ ಹೊಯ್ಸಳರು ಕರ್ನಾಟಕದ ಇತಿಹಾಸದಲ್ಲಿ ತಮ್ಮದೇ ಆದ ಸ್ಥಾನವನ್ನು ಉಳಿಸಿಕೊಂಡು ಬಂದಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ದೊರಕಿರುವ ಹೆಚ್ಚು ಶಾಸನಗಳು ಅವರ ಆಳ್ವಿಕೆಯನ್ನು ಸಮರ್ಥಿಸುತ್ತವೆ. ಇವರ ಆಳ್ವಿಕೆಯಲ್ಲಿ ೫೦ಕ್ಕೂ ಹೆಚ್ಚು ಶಾಸನಗಳು ಚಿತ್ರದುರ್ಗದಲ್ಲಿ ದೊರಕಿವೆ. ಅವುಗಳ ಆಧಾರದಿಂದ ಹೊಯ್ಸಳರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಇಡೀ ಜಿಲ್ಲೆಯನ್ನು ಆಕ್ರಮಿಸಿಕೊಂಡಿದ್ದು ಸುತ್ತಮುತ್ತಲಿನ ಪ್ರದೇಶಗಳಲ್ಲಿಯ ಆಳ್ವಿಕೆ ನಡೆಸಿರುವುದು ತಿಳಿದುಬರುತ್ತದೆ. ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಕೆರೆ, ಕಾಲುವೆ, ದೇವಾಲಯ, ಅಗ್ರಹಾರ ಇತ್ಯಾದಿಗಳನ್ನು ಕುರಿತಾಗಿ ಈ ಪ್ರದೇಶದಲ್ಲಿ ದೊರೆತಿರುವ ಶಾಸನಗಳು ವಿವರಣೆ ನೀಡುತ್ತವೆ.[೫೦]

ಹೊಯ್ಸಳ ಪ್ರಭು ಇಮ್ಮಡಿ ಬಲ್ಲಾಳನ ಶಾಸನವು ಈ ಜಿಲ್ಲೆಯಲ್ಲಿ ದೊರೆತ ಹೊಯ್ಸಳ ಮನೆತನದ ಪ್ರಥಮ ಶಾಸನವಾಗಿದೆ. ಇಮ್ಮಡಿ ಬಲ್ಲಾಳನ ಕಾಲದ ಈ ಪ್ರದೇಶದಲ್ಲಿ ಎರಡು ಶಾಸನಗಳು (ಹಿರಿಯೂರು–೭೦, ಹೊಳಲ್ಕೆರೆ–೨೮) ದೊರೆತಿವೆ. ಈ ಶಾಸನಗಳು ಅವನ ಕಾಲದ ರಾಜಕೀಯ, ಸಾಮಾಜಿಕ, ಮತ್ತಿತರ ಸಂಗತಿಗಳನ್ನು ಕುರಿತು ವಿವರಣೆ ನೀಡುತ್ತವೆ.[೫೧]

ಈ ಮಧ್ಯೆ ಚಿತ್ರದುರ್ಗ ಜಿಲ್ಲೆಯ ವಿವಿಧ ಪ್ರದೇಶಗಳಲ್ಲಿ ಸಾಮಂತ ಮನೆತನಗಳಾದ ಗಂಗರು, ಸಿಂಧರು, ಚೋಳರು ಕ್ರಿ.ಶ. ೭೫೦ ರಿಂದ ೧೨೦೦ರವರೆಗೆ ಆಳ್ವಿಕೆ ಮಾಡಿರುವುದು ಶಾಸನಗಳಲ್ಲಿ ಕಂಡುಬರುತ್ತದೆ. ಇದಕ್ಕೆ ಪುರಾವೆಯಾಗಿ ಚೋಳರಿಗೆ ಸಂಬಂಧಿಸಿದ ಕೆಲವು ಶಾಸನಗಳು ಚಳ್ಳಕೆರೆ ಪರಿಸರದಲ್ಲಿ ದೊರೆತಿವೆ.

**ಸೇವುಣರು**

ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಕದಂಬ, ಚಾಲುಕ್ಯರು, ರಾಷ್ಟ್ರಕೂಟರ ಮನೆತನಗಳಂತೆ ದೇವಗಿರಿಯ ಸೇವುಣರು ಕೆಲವು ಕಾಲ ಇಲ್ಲಿ ಆಳ್ವಿಕೆ ನಡೆಸಿದ್ದಾರೆ ಎನ್ನುವುದು ತಿಳಿದುಬರುತ್ತದೆ. ಇವರಿಗೆ ಸಂಬಂಧಿಸಿದ ಶಾಸನಗಳು ದೊರೆಯದೇ ಇದ್ದರೂ ಚಿತ್ರದುರ್ಗ ಜಿಲ್ಲೆಯಾದ್ಯಂತ ದೊರಕಿದಂತಹ ಶಾಸನಗಳ ಆಧಾರದಿಂದ ಈ ಪ್ರದೇಶವು ಸೇವುಣರಿಗೆ ಸಂಬಂಧಿಸಿದ್ದಾಗಿತ್ತೆಂದು ಹೇಳಬಹುದು.[೫೨] ಚಿತ್ರದುರ್ಗ ಜಿಲ್ಲೆಯಲ್ಲಿ ಸೇವುಣರ ಆಳ್ವಿಕೆಯ ಬಗ್ಗೆ ಸುಮಾರು ೨೦ ಶಾಸನಗಳು ದೊರೆತಿವೆ. ಕೆಲವು ಶಾಸನಗಳಲ್ಲಿ ಸೇವುಣರು ತಮ್ಮನ್ನು ಯಾದವರೆಂದು ಕರೆದುಕೊಂಡಿದ್ದಾರೆ.

**ವಿಜಯನಗರ**

ಹೊಯ್ಸಳ ಸಾಮ್ರಾಜ್ಯ ಪತನ ಹೊಂದಿದ ತರುವಾಯ ವಿಜಯನಗರ ಸಾಮ್ರಾಜ್ಯವು ಅಸ್ತಿತ್ವಕ್ಕೆ ಬಂದಿತು. ಇದನ್ನು ಮರೆತುಹೋದ ಹಾಗೂ ಮರೆಯಲಾಗದ ಸಾಮ್ರಾಜ್ಯವೆಂದು ಇತಿಹಾಸಕಾರರು ಬಣ್ಣಿಸಿದ್ದಾರೆ. ಕ್ರಿ.ಶ. ೧೩೩೬ ರಿಂದ ೧೫೬೫ರವರೆಗೆ ಆಳ್ವಿಕೆ ನಡೆಸಿದ ವಿಜಯನಗರದ ಅರಸರು ಚಿತ್ರದುರ್ಗ ಜಿಲ್ಲೆಯನ್ನು ತಮ್ಮ ವಿಭಾಗಗಳನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ವಿಜಯನಗರದ ಅರಸರು ಅನೇಕ ವಿಭಾಗಗಳನ್ನು ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದರು. ಈ ವಿಭಾಗಗಳು ಮೊದಲನೆಯ ಬುಕ್ಕನ ಕಾಲದಿಂದಲೇ ಇದ್ದವು ಎಂಬುದಕ್ಕೆ ಹಲವು ಶಾಸನಗಳ ಆಧಾರಗಳಿವೆ. ಜೊತೆಗೆ ಕೃಷಿ ಅಭಿವೃದ್ಧಿಗೆ ದೇವಾಲಯಗಳ ಜೀರ್ಣೋದ್ಧಾರಕ್ಕೆ ದಾನದತ್ತಿಗಳನ್ನು ನೀಡಿದ ಬಗ್ಗೆ ಶಾಸನಗಳಿಂದ ತಿಳಿಯಬಹುದಾಗಿದೆ.[೫೩]

ವಿಜಯನಗರದ ಅರಸರು ಸಹ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ನೇರ ಆಳ್ವಿಕೆ ನಡೆಸದಿದ್ದರೂ ಇವರ ಸಾಮಂತರಾಗಿ ಚಿತ್ರದುರ್ಗ ಪಾಳೆಗಾರರು ಹಾಗೂ ಹರ್ತಿಕೋಟೆಯ ಪಾಳೆಯಗಾರರು ಆಳ್ವಿಕೆ ನಡೆಸಿದರು.[೫೪] ಕ್ರಿ.ಶ. ೧೫೬೫ರಲ್ಲಿ ವಿಜಯನಗರ ಸಾಮ್ರಾಜ್ಯ ನಾಶವಾದಾಗ ತದನಂತರ ಚಳ್ಳಕೆರೆ ಪ್ರದೇಶವು ಸಹ ಇವರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ತಿಳಿಯಬಹುದು. ಚಿತ್ರದುರ್ಗ ಜಿಲ್ಲೆಯಲ್ಲಿ ಇವರ ಆಳ್ವಿಕೆಗೆ ಸಂಬಂಧಿಸಿದಂತೆ ಸಾಕಷ್ಟು ಶಾಸನಗಳು, ಶಿಲ್ಪಗಳು, ವೀರಗಲ್ಲುಗಳು, ಮಹಾಸತಿಗಲ್ಲುಗಳು ಸಾಕಷ್ಟು ಪ್ರಮಾಣದಲ್ಲಿದ್ದು, ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಸಾಂಸ್ಕೃತಿಕ ಅಂಶಗಳನ್ನು ಕಾಣಬಹುದು.[೫೫]

**ಹರತಿ ಪಾಳೆಯಗಾರರು**

ಶಾಸನಗಳು ವ್ಯಕ್ತಪಡಿಸುವಂತೆ ಚಿತ್ರದುರ್ಗದ ಪಾಳೆಯಗಾರರಿಗಿಂತ ಮೊದಲೇ ರಾಯದುರ್ಗ,

ಹರತಿ ಪಾಳೆಯಗಾರರು ಈ ಜಿಲ್ಲೆಯ ಕೆಲವು ಪ್ರದೇಶಗಳ ಮೇಲೆ ತಮ್ಮ ಆಳ್ವಿಕೆ ಸ್ಥಾಪಿಸಿದ್ದರು. ಚಿತ್ರದುರ್ಗದ ಪಾಳೆಯಗಾರರು ಇಲ್ಲಿ ನೆಲೆಸಿದ ನಂತರ (ಕ್ರಿ.ಶ. ೧೫೫೬) ಸಂತೆಬೆನ್ನೂರು, ಹಟ್ಟಿ, ಮತ್ತಿನಾಡು ಪಾಳೆಯಗಾರರು ಈ ಜಿಲ್ಲೆಯ ಕೆಲವು ಭಾಗಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಆಳ್ವಿಕೆ ನಡೆಸಿದರು. ಈ ಮನೆತನದ ಶಾಸನಗಳು ಶಕ ೧೨೩೫ (ಕ್ರಿ.ಶ. ೧೩೧೩) ರಿಂದ ಶಕ ೧೬೬೦ (ಕ್ರಿ.ಶ. ೧೭೩೮)ರವರೆಗೆ ಚಳ್ಳಕೆರೆಯಲ್ಲಿ ದೊರೆತಿದ್ದು, ಈ ಮನೆತನದ ನಾಯಕರ ಬಗ್ಗೆ ರಾಜಕೀಯ, ಆಡಳಿತಾತ್ಮಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಾಧನೆಗಳಿಗೆ ಸಂಬಂಧಿಸಿದಂತೆ ಅಮೂಲ್ಯವಾದ ಮಾಹಿತಿಯನ್ನು ನೀಡುತ್ತವೆ.

ಚಳ್ಳಕೆರೆ ಶಾಸನದ[೫೬] ಪ್ರಕಾರ ತಿಪ್ಪರಾಜನ ಮಗ ಕಾಮನಾಯಕ, ಅವನ ಹಿರಿಯ ಮಗ ಅಬ್ಬಯನಾಯಕರು ಕೋಟೆಕೆರೆ ಎಂಬಲ್ಲಿ ನೆಲೆವೀಡನ್ನು ಹೊಂದಿದ್ದನಾದ್ದರಿಂದ ಇವನನ್ನು ಕೋಟೆಕೆರೆಯ ಅಬ್ಬಯನಾಯಕನೆಂದೇ ಕರೆಯಲಾಗುತ್ತಿದ್ದಿತು. ಕಾಮನಾಯಕನ ಕಿರಿಯ ಮಗ ಮಲ್ಲೆಯನಾಯಕನು ಪರಶುರಾಂಪುರದಲ್ಲಿ ನೆಲೆಸಿ, ಅಲ್ಲಿನ ಗರುಡದೇವರನ್ನು ಹನುಮಂತ ದೇವರನ್ನು ಪ್ರತಿಷ್ಠಾಪಿಸಿದನೆಂದು ವಿವರಣೆ ನೀಡುತ್ತದೆ. ಈ ವಂಶಜರು ಬಿಜಾಪುರ ಪ್ರಾಂತ್ಯದ ದೊಡ್ಡೇರಿ, ಹರತಿ ಪ್ರದೇಶಗಳಲ್ಲಿ ನೆಲೆಸಿದ್ದು, ನಂತರ ತಿಪ್ಪಣನಾಯಕರು ಚಿತ್ರದುರ್ಗ ಜಿಲ್ಲೆಯ ಪೂರ್ವ ಭಾಗಕ್ಕೆ ಮಾಂಡಲೀಕನಾಗಿ ನೇಮಕಗೊಂಡನು.

ಈ ನಾಯಕರು ಮಾಚಿಸಮುದ್ರ ಗೋಸಿಕೆರೆ, ಚಳ್ಳಕೆರೆ ಪ್ರಾಂತ್ಯಗಳ ಆಡಳಿತ ವಹಿಸಿಕೊಂಡು, ಈ ಪ್ರದೇಶದಲ್ಲಿದ್ದ ಕಾಡನ್ನು ಸವರಿ ಅಲ್ಲಿ ತನ್ನ ಪೂರ್ವಜರ ನೆನಪಿಗಾಗಿ ಎರಡು ಪಟ್ಟಣಗಳನ್ನು ಕಟ್ಟಿಸಿದನು. ಇವುಗಳಿಗೆ ದೊಡ್ಡೇರಿ ಮತ್ತು ಹರತಿ ಎಂದೇ ನಾಮಕರಣ ಮಾಡಿದನು. ಈತನ ಪ್ರಾಂತ್ಯವು ಚಿತ್ರದುರ್ಗದಿಂದ ಪಾವಗಡದವರೆಗೂ, ಮೊಳಕಾಲ್ಮೂರಿನಿಂದ ಶಿರಾ ಪ್ರಾಂತ್ಯದವರೆಗೂ ವಿಸ್ತರಿಸಿತ್ತು.[೫೭]

ತಿಪ್ಪಣ್ಣ ನಾಯಕನ ಮಗ ಒಬ್ಬನಾದ ತಿಮ್ಮಣ್ಣನಾಯಕನೆಂಬುವನು ತಾನು ಆಳುತ್ತಿದ್ದ ದೊಡ್ಡೇರಿ ಸೀಮೆಯನ್ನು ಹೋರಾಟದಲ್ಲಿ ಕಳೆದುಕೊಂಡನು. ನಂತರ ಅವನು ಧೃತಿಗೆಡದೆ ನಿಡುಗಲ್ಲು ಬೆಟ್ಟವನ್ನಾಶ್ರಯಿಸಿ ಅಲ್ಲಿ ಕೋಟೆ ಕಟ್ಟಿಸಿ ನೆಲೆಸಿದನು. ಅಂದಿನಿಂದ ಇವರನ್ನು ಹರತಿ–ನಿಡುಗಲ್ಲು ಪಾಳೆಯಗಾರರೆಂದು ಕರೆಯಲು ಆರಂಭವಾಯಿತು.[೫೮] ಇವರಿಗೆ ಸಂಬಂಧಿಸಿದ ಶಾಸನಗಳು ಚಳ್ಳಕೆರೆ ಪ್ರದೇಶದಲ್ಲಿ ದೊರಕಿದ್ದು, ಈ ಪ್ರದೇಶದ ಮೇಲೆ ಅವರು ಸ್ಥಾಪಿಸಿದ ಅಧಿಕಾರದ ದ್ಯೋತಕಗಳೆನಿಸಿವೆ. ಇವರ ಕುರಿತು ಚಳ್ಳಕೆರೆಯ ಶಾಸನದಿಂದ[೫೯] (ಕ್ರಿ.ಶ. ೧೭೪೯) ಆಪ್ತಸ್ತಂಭ ಸೂತ್ರ ಮತ್ತು ಆತ್ರೇಯ ಗೋತ್ರದವರೆಂತಲೂ ತಿಳಿದುಬರುತ್ತದೆ. ಇನ್ನೊಂದು ಶಾಸನ ಇವರ ವಂಶಾವಳಿಯನ್ನು ಉಲ್ಲೇಖಿಸಿದೆ. ಇವರು ದೈವಭಕ್ತಿ ಸಂಪನ್ನರು, ವಿದ್ಯಾಭಿಮಾನಿಗಳೂ ಆಗಿದ್ದರೆಂಬುದಕ್ಕೆ ದೇವಾಲಯಗಳಿಗೂ ಅಗ್ರಹಾರಗಳಿಗೂ ದತ್ತಿ ನೀಡಿದ ಬಗ್ಗೆ ಬರೆಸಿರುವ ಶಾಸನಗಳು ಸಾಕ್ಷಿಯೆನಿಸಿವೆ.[೬೦] ಈ ಪರಿಸರಕ್ಕೆ ಸೇರಿದ ದೊಡ್ಡೇರಿ ಸೀಮೆ, ಗೋಸಿಕೆರೆ ಸೀಮೆಯು ಇವರ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿದುಬರುತ್ತದೆ. ಎರ್ರಕೃಷ್ಣಪ್ಪ ನಾಯಕನ

ಮಗ ಇಮ್ಮಡಿ ಕೃಷ್ಣಪ್ಪನು ಕಾಮಸಮುದ್ರದ ವೀರಭದ್ರ ದೇವರ ಪೂಜೆಗಾಗಿ ಗದ್ದೆಯನ್ನು ನೀಡಿದ ವಿವರಣೆಯನ್ನು ಚಳ್ಳಕೆರೆ ಶಾಸನ ತಿಳಿಸುತ್ತದೆ.

### ಚಿತ್ರದುರ್ಗ ಪಾಳೆಯಗಾರರು

ಪ್ರಾಚೀನ ಭಾರತದಲ್ಲಿ ದಕ್ಷಿಣಾಪಥ ಪ್ರಸ್ಥಭೂಮಿಯಲ್ಲಿ ಚಿಕ್ಕ ಪುಟ್ಟ ಬಣಗಳ ನಾಯಕರು ಪಾಳೆಯಗಾರರೆಂಬ ಹೆಸರಿನಿಂದ ಅಲ್ಲಲ್ಲಿ ಅರಸರೆನಿಸಿಕೊಂಡಿದ್ದರು. ಈ ಪಾಳೆಯಗಾರರು ಪಶುಪಾಲನೆ ಮಾಡುತ್ತಾ ತಮ್ಮದೇ ಆದ ಗುಂಪುಗಳನ್ನು ಕಟ್ಟಿಕೊಂಡು ಬದುಕುತ್ತಿದ್ದ ಇವರು ಮೂಲತಃ ಮ್ಯಾಸಬೇಡರಾಗಿದ್ದರು. ಅರಣ್ಯ ಪ್ರದೇಶದಲ್ಲಿ ವಾಸಮಾಡುತ್ತಿದ್ದ ಇವರು ಸಹಜವಾಗಿಯೇ ಧೈರ್ಯವಂತರೂ, ದೃಢಕಾಯರೂ ಆಗಿದ್ದರು. ಇಂಥವರನ್ನು ರಾಜ ಮಹಾರಾಜರು ಒಂದು ಕಡೆ ನಿಲ್ಲಿಸಿ ಪಾಳೆಯಪಟ್ಟಗಳನ್ನು ನಿರ್ಮಿಸಿಕೊಟ್ಟು ತಮ್ಮ ಸಹಾಯಕ್ಕೆ ಬಳಸಿಕೊಂಡಿರುವುದನ್ನು ಕಾಣುತ್ತೇವೆ.[೬೧] 'ಪಾಳೆಯ' ಎಂಬ ಪದ ದಂಡು, ಸೈನ್ಯ, ಸೇನಾ ವಿಭಾಗ, ಶಿಬಿರ, ಠಾಣೆ ಎಂಬ ವಿವಿಧ ಅರ್ಥಗಳನ್ನು ಸೂಚಿಸುತ್ತದೆ.

### ದೊಡ್ಡೇರಿ ಪಾಳೆಗಾರರ ಪಂಜಿನ ಯುದ್ಧ

ದಾಖಲೆಯ ಪ್ರಕಾರ ೧೮೮೨ರ ಸಮಯದಲ್ಲಿ ದೊಡ್ಡೇರಿಯು ತಾಲ್ಲೂಕಾಗಿತ್ತು. ರೈತರಿಂದ ವಸೂಲಿ ಮಾಡಿದ ಭೂಕಂದಾಯದ ಹಣ ದೊಡ್ಡೇರಿ ಟ್ರಜರಿಯಲ್ಲಿ ಇರುತ್ತಿತ್ತು. ಈ ವಿಷಯ ತಿಳಿದು ಶಿರಾ ನವಾಬ ತನ್ನ ಪಾಳೆಗಾರರನ್ನು ಕಳುಹಿಸಿ ಆ ಟ್ರಜರಿಯನ್ನು ಹೊತ್ತು ತರುವಂತೆ ಕಳುಹಿಸಿದನು. ಶಿರಾದ ಖಾಸಿಂಖಾನ್ ಕಡೆಯ ಪಾಳೆಗಾರರು ಒಂದು ರಾತ್ರಿ ದಂಡು ಸಮೇತ ಒಂದು ಊರನ್ನು ಕೊಳ್ಳೆ ಹೊಡೆದು ಟ್ರಜರಿಯನ್ನು ಒಯ್ಯುವ ಸಮಯದಲ್ಲಿ ದೊಡ್ಡೇರಿ ಪಾಳೆ ಪಟ್ಟನ್ನು ನೋಡಿಕೊಳ್ಳುತ್ತಿದ್ದ ಚಿನ್ನೋಬನಾಯಕ ಎಂಬುವವರನ್ನು ತನ್ನ ಬೆಂಬಲಿಗರೊಂದಿಗೆ ಪಂಜು ಹಿಡಿದು ಅವರನ್ನು ಬೆನ್ನಟ್ಟಿ ಊರ ಮುಂದಿನ ಮೈದಾನದಲ್ಲಿ ಪಂಜಿನ ಬೆಳಕಿನಲ್ಲಿ ಭೀಕರ ಹೋರಾಟ ನಡೆಸಿದರು. ಅವರನ್ನು ಬೆನ್ನಟ್ಟಿ ಗಂಟು ಕಟ್ಟಿದ ನಗ ನಾಣ್ಯದ ಚೀಲಗಳನ್ನು ಎಳೆದಾಡಿ ತಮ್ಮ ವಶಕ್ಕೆ ತೆಗೆದುಕೊಂಡರು. ಆಗ ನಗ ನಾಣ್ಯ ಚೆಲ್ಲಾಡಿದವು. ಆ ಸಂದರ್ಭದಲ್ಲಿ ಬಯಲಿನ ತುಂಬಾ ಚೆಲ್ಲಾಡಿದ ನಗ ನಾಣ್ಯಗಳು ಕ್ರಮೇಣ ಮಣ್ಣಿನಲ್ಲಿ ಹೂತು ಹೋಗಿದ್ದು ಕೆರೆ ನಿರ್ಮಿಸಿದ ಸಂದರ್ಭದಲ್ಲಿ ಸಾಕಷ್ಟು ನಾಣ್ಯಗಳು ಸಿಕ್ಕಿವೆ ಎಂಬ ವಿಚಾರವು ಒಂದು ದಾಖಲೆಯಾಗಿದೆ.[೬೨]

### ದೊಡ್ಡೇರಿ ಕದನ

ಚಿತ್ರದುರ್ಗ ಪ್ರಸಿದ್ಧ ದರೆ ಬಿಚ್ಚುಗತ್ತಿ ಭರಮಣ್ಣನಾಯಕನ (೧೬೮೯–೧೭೨೧) ಅವಧಿಯಲ್ಲಿ ನಡೆದ ದೊಡ್ಡೇರಿ ಕದನವು ದಕ್ಷಿಣ ಭಾರತ ಇತಿಹಾಸ ಪುಟದಲ್ಲಿ ತನ್ನದೇ ಪ್ರಾಮುಖ್ಯತೆ ಪಡೆದುಕೊಂಡಿದೆ. ಅಲ್ಲದೇ ಕರ್ನಾಟಕದಲ್ಲಿ ಮರಾಠರ ಸೇನಾಪತಿ ಸಂತಾಜಿ ಘೋರ್ಪಡೆ ನಡೆಸಿದ ಯುದ್ಧಗಳಲ್ಲಿ ಇದು ಹೆಮ್ಮೆ ಪಡುವಂತಾದ್ದೆಂದು ಭಾವಿಸಲ್ಪಟ್ಟಿದೆ. ಮರಾಠರು ಮತ್ತು ಮೊಗಲರ ಸೇನೆಯು ಚಿತ್ರದುರ್ಗ ಗಡಿ ಭಾಗದ ಪ್ರದೇಶವಾದ ದೊಡ್ಡೇರಿಯಲ್ಲಿ (ಚಳ್ಳಕೆರೆ

ತಾಲ್ಲೂಕು) ನಡೆಸಿದ ಹೋರಾಟದಲ್ಲಿ ಭರಮಣ್ಣನಾಯಕ ಹಾಗೂ ಈತನ ಮಗ ಓರೆ ಮದಕರಿನಾಯಕರು ಭಾಗವಹಿಸಿದ್ದುದು ವಿಶೇಷ. ದೊಡ್ಡೇರಿಯನ್ನು ಉಳಿಸಿಕೊಳ್ಳುವಲ್ಲಿ ಈ ನಾಯಕ ಪ್ರಯಾಸ ಪಡಬೇಕಾಯಿತು.

ಮರಾಠಿ, ಫಾರ್ಸಿ ಮತ್ತು ಕನ್ನಡ ಆಕರಗಳು ಈ ದೊಡ್ಡೇರಿ ಕದನವನ್ನು ವಿವರವಾಗಿ ನಿರೂಪಿಸುತ್ತವೆಂಬುದೇ ಈ ಕದನಕ್ಕಿರುವ ಮಹತ್ವವು ಮನದಟ್ಟಾಗುತ್ತದೆ. ಸಮಕಾಲೀನ ಫಾರ್ಸಿ ಕೃತಿ ಮಾಸಿರ್-ಇ-ಅಲಂಶೀಂ (ಸಾಬಿ ಮುಸ್ತಾದ್ ಖಾನ್) ಆ ನಂತರದ "ಮುಂತಬಾಬ್-ಉಲ್-ಲುಬಾಬ್-ಇ ಮಹಮ್ಮದ್ ಶಾಹಿ" (ಖಾಫಿಖಾನ್) ಮರಾಠೀ ಭಾಷೆಯಲ್ಲಿರುವ ಶಿವ ಚರಿತ್ರ ದೀಪ, ಜೇಧಶಕಾವಲಿ ಮೊದಲಾದವು ದೊಡ್ಡೇರಿ ಕದನದ ಬಗೆಗೆ ಪ್ರಸ್ತಾಪಿಸಿರುವುದು ಗಮನಾರ್ಹ. ಆಧುನಿಕ ಇತಿಹಾಸಕಾರರೂ ತಮ್ಮ ಮರಾಠೀ ಹಾಗೂ ಆಂಗ್ಲ ಭಾಷಾ ಕೃತಿಗಳಲ್ಲಿ ಈ ಕದನದ ಕುರಿತು ಸ್ವಲ್ಪಮಟ್ಟಿಗಾದರೂ ವಿವರ ನೀಡಿದ್ದಾರೆ.[೬೩]

**ಅಡಿ ಟಿಪ್ಪಣಿಗಳು**

೧. ನಂಜಣ್ಣನವರು ಎಸ್.ಎಸ್., ಸಜ್ಜನರ ಎಮ್.ಜಿ., ೨೦೦೨, ಭೂಗೋಳಶಾಸ್ತ್ರ ಬೋಧನೆ, ಪು.೧.

೨. ಜನಗಣತಿಯ ಅಂಕಿ ಅಂಶಗಳ ಮಾಹಿತಿ ತಾಲ್ಲೂಕು ಕಚೇರಿ, ಚಳ್ಳಕೆರೆ

೩. ಪೂರ್ವೋಕ್ತ, ಜನಗಣತಿಯ ಅಂಕಿ ಅಂಶಗಳ ಮಾಹಿತಿ ತಾಲ್ಲೂಕು ಕಚೇರಿ, ಚಳ್ಳಕೆರೆ

೪. ಚಳ್ಳಕೆರೆ ಕಸಬಾ ಹೋಬಳಿ ವಿಸ್ತೀರ್ಣದ ಮಾಹಿತಿ, ಕೃಷಿ ಇಲಾಖೆ, ಚಳ್ಳಕೆರೆ, ೨೦೧೭.

೫. ಅಕ್ಷಾಂಶ ರೇಖಾಂಶದ ಮಾಹಿತಿ, ಭಾರತ ವಾಯು ವಿಜ್ಞಾನ ಮತ್ತು ಹವಾಮಾನ ವೀಕ್ಷಣಾಲಯ ಇಲಾಖೆ, ಚಿತ್ರದುರ್ಗ.

೬. ಪೂರ್ವೋಕ್ತ, ಜನಗಣತಿಯ ಅಂಕಿ ಅಂಶಗಳ ಮಾಹಿತಿ ತಾಲ್ಲೂಕು ಕಚೇರಿ, ಚಳ್ಳಕೆರೆ

೭. ನಂಜಣ್ಣನವರ ಎಸ್.ಎಸ್., ೨೦೦೨, ಮಾನವ ಭೂಗೋಳಶಾಸ್ತ್ರ ಪು. ೧.

೮. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಪೂರ್ವೋಕ್ತ, ಪು. ೯೦೦.

೯. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ೨೦೦೪, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು. ೯೦೦.

೧೦. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಪೂರ್ವೋಕ್ತ, ಪು. ೯೦೦.

೧೧. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಪೂರ್ವೋಕ್ತ, ಪು. ೯೦೦.

೧೨. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು. ೬೩೬.

೧೩. ಪಪ್ಪು ಆರ್.ಎಸ್., ಪ್ರಾಚೀನತಮ ಮಾನವ ಸಂಸ್ಕೃತಿಗಳು, ವಿಕಸನದ ಹಂತಗಳು, ಕರ್ನಾಟಕ ಚರಿತ್ರೆ ಸಂ-೧, ೧೯೯೭, ಪು. ೯೭.

೧೪. ಶಿವತಾರಕ್ ಕೆ.ವಿ., ಕರ್ನಾಟಕದ ಪುರಾತತ್ವ ನೆಲೆಗಳು, ಪು. ೧೦.

೧೫. ಕರ್ನಾಟಕ ದೇವಾಲಯ ಕೋಶ, ಚಿತ್ರದುರ್ಗ ಜಿಲ್ಲೆ ಎಸ್.ವೈ. ಸೋಮಶೇಖರ್, ಪು. ೨೧.

೧೬. ಅದೇ, ಪು. ೨೧

೧೭. ಕರ್ನಾಟಕ ದೇವಾಲಯ ಕೋಶ, ಚಿತ್ರದುರ್ಗ ಜಿಲ್ಲೆ ಎಸ್.ವೈ. ಸೋಮಶೇಖರ್, ಪು. ೨೨.

೧೮. ಅದೇ, ಪು. ೨೨.

೧೯. ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ ರಾಮದಾಸರೆಡ್ಡಿ ಎಸ್.ಜಿ., ಪು. ೧೪.

೨೦. ಅದೇ, ಪು. ೧೪.

೨೧. ಕರ್ನಾಟಕ ದೇವಾಲಯ ಕೋಶ, ಚಿತ್ರದುರ್ಗ ಜಿಲ್ಲೆ ಎಸ್.ವೈ. ಸೋಮಶೇಖರ್, ಪು. ೨೩.

೨೨. ಅದೇ, ಪು. ೨೩.

೨೩. ಅದೇ, ಪು. ೨೩.

೨೪. ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ ರಾಮದಾಸರೆಡ್ಡಿ ಎಸ್.ಜಿ., ಪು. ೧೪.

೨೫. ಕರ್ನಾಟಕ ದೇವಾಲಯ ಕೋಶ, ಚಿತ್ರದುರ್ಗ ಜಿಲ್ಲೆ ಎಸ್.ವೈ. ಸೋಮಶೇಖರ್, ಪು. ೨೩.

೨೬. ಅದೇ, ಪು. ೨೪.

೨೭. ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ ರಾಮದಾಸರೆಡ್ಡಿ ಎಸ್.ಜಿ., ಪು. ೧೮.

೨೮. ಅದೇ, ಪು. ೨೧.

೨೯. ಅದೇ, ಪು. ೨೧.

೩೦. ಎ.ಕ.ಸಂ.೧೧ (ಹಳೆಯ), ೧೯೦೩, ಶಾಸನ ಸಂ. ೨೯, ಪು. ೩೧೦.

೩೧. ಸುಂದರ ಅ., ಕರ್ನಾಟಕ ಚರಿತ್ರೆ ಸಂ–೧, ೧೯೯೭, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೮೦.

೩೨. ಚಂದ್ರವಳ್ಳಿ, ಪೂರ್ವೋಕ್ತ, ಪು. ೯.

೩೩. Krishna M.H., Excaration ed Chandrayalli and Bramhagiri, 1931, hg. 271.

೩೪. Ibid, P. 278

೩೫. ಅದೇ ಪು. ೧೦.

೩೬. Epigraphia Carnatica-XI, Challakere, 33-34.

೩೭. ಗೋಪಾಲ್ ಆರ್ (ಸಂ), ೨೦೦೫, ಚಿತ್ರದುರ್ಗ ಜಿಲ್ಲಾ ಇತಿಹಾಸ ಮತ್ತು ಪುರಾತತ್ವ, ಪು. ೭೧.

೩೮. Epigraphia Carnatica-XI, Challakere-5

೩೯. Epigraphia Carnatica-XI, Challakere-6

೪೦. Epigraphia Carnatica-XI, Challakere-7

೪೨. Epigraphia Carnatica-XI, Challakere-31

೪೩. ಚಂದ್ರವಳ್ಳಿ, ಪೂರ್ವೋಕ್ತ, ಪು. ೨೯.

೪೪. Epigraphia Carnatica-XI, Challakere-33

೪೪. ಕರ್ನಾಟಕ ಪರಂಪರೆ ಭಾಗ-೧, (ಚಾರಿತ್ರಿಕ ಯುಗ), ೧೯೭೦, ಪು. ೧೨೭.

೪೫. ಅದೇ, ಪು. ೧೨೮.

೪೭. ಚಂದ್ರವಳ್ಳಿ, ಪೂರ್ವೋಕ್ತ, ಪು. ೩೦.

೪೮. ಕರ್ನಾಟಕ ಪರಂಪರೆ ಭಾಗ-೧, (ಚಾರಿತ್ರಿಕ ಯುಗ) ೧೯೭೦, ಪು. ೧೨೮

೪೯. ಪೂರ್ವೋಕ್ತ, ಪು. ೧೨೮

೫೦. ಶ್ರೀನಿವಾಸ ಎಂ.ವಿ., ಲಕ್ಷ್ಮಣ್ ತೆಲಗಾವಿ (ಸಂ), ಚಂದ್ರವಳ್ಳಿ, ೧೯೭೬, ಪು. ೩೫.

೫೧. ಅದೇ, ಪು. ೧೭.

೫೨. ಗಿರಿಜಾ ಟಿ., ಪೂರ್ವೋಕ್ತ, ೧೯೯೧, ಪು. ೩೩೫.

೫೩. ಶ್ರೀನಿವಾಸ ಎಂ.ವಿ., ಲಕ್ಷ್ಮಣ್ ತೆಲಗಾವಿ (ಸಂ), ಪೂರ್ವೋಕ್ತ, ಪು. ೩೫.

೫೪. ಶ್ರೀನಿವಾಸ ಎಂ.ವಿ., ಲಕ್ಷ್ಮಣ್ ತೆಲಗಾವಿ (ಸಂ), ಪೂರ್ವೋಕ್ತ, ಪು. ೩೫.

೫೫. Epigraphia Carnatica-XI, Challakere-37

೫೬. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಾಂಸ್ಕೃತಿಕ, ೧೯೯೫, ಪು. ೨೧೨

೫೭. ಚಂದ್ರವಳ್ಳಿ. ಪೂರ್ವೋಕ್ತ, ಪು. ೬೬.

೫೮. ಪೂರ್ವೋಕ್ತ, ಪು. ೭೭.

೫೯. Epigraphia Carnatica-XI, Challakere-54 (1559 AD 13(1500AD), 38 (1739 AD)

೬೦. Epigraphia Carnatica-XI, Challakere-54 (1559 AD 13(1500AD), 38 (1739 AD)

೬೧. ಕೃಷ್ಣಮೂರ್ತಿ ಹನೂರು, ೧೯೯೫, ಮ್ಯಾಸಬೇಡರ ಸಾಂಸ್ಕೃತಿಕ, ಪು. ೨೧೨.

೬೨. ಡಿ.ಎಸ್. ಶಿವಕುಮಾರ್, ನಮ್ಮೂರಿನಿಂದ ಹಿಮಾಲಯದತ್ತ ಪು. ೭೬

೬೩. ಪೂರ್ವೋಕ್ತ, ಪು. ೭೯.



# ಅಧ್ಯಾಯ: ಮೂರು

# ಸ್ಥಳನಾಮ, ಸ್ಥಳಪುರಾಣ ಮತ್ತು ಐತಿಹ್ಯಗಳು

## ೩.೧. ಸ್ಥಳನಾಮಗಳು

ಮಾನವನ ಹುಟ್ಟು ಮತ್ತು ಜೀವನ ವಿಕಾಸ ಕ್ರಮ ಈಗಲೂ ಸೋಜಿಗವನ್ನುಂಟು ಮಾಡುತ್ತದೆ. ಹುಟ್ಟಿದ ಮೊದಲ ಹಂತದಲ್ಲಿ ಗೆಡ್ಡೆ, ಗೆಣಸು, ಹಣ್ಣು, ಹಂಪಲು, ಮಾಂಸ ಇವು ಮಾನವನ ಮುಖ್ಯ ಆಹಾರಗಳಾಗಿದ್ದವು. ಮರದ ಪೊಟರೆ, ಗುಹೆ, ತಪ್ಪಲು ಪ್ರದೇಶ ಒಟ್ಟಾರೆ ಸಾಟು ಇದ್ದ ಕಡೆಗಳಲ್ಲಿ ನೆಲೆ ನಿಲ್ಲುವಂತಾಯಿತು. ತರುವಾಯ ನಾಗರೀಕರಾದರು. ಕೆಲವು ಹಂತಗಳಲ್ಲಿ ಅಲೆಮಾರಿತನವನ್ನು ತೊರೆದು ನೆಲೆಸಲು ಆರಂಭಿಸಿದರು. ಈ ನಿಲ್ಲುವಿಕೆಯು ಪ್ರಾಥಮಿಕ ಒಂದೊಂದು ಗುಂಪಿನ ಮಾದರಿಯಲ್ಲಿತ್ತು. ಮುಂದೆ ಹಲವಾರು ಸಮುದಾಯಗಳು ಒಟ್ಟಿಗೆ ಬದುಕುವುದನ್ನು ಆರಂಭಿಸಿದರು. ಈ ಹಂತವನ್ನು ಸಮುದಾಯಗಳು ನೆಲೆಸುವಿಕೆಯ ಗ್ರಾಮ ಕಲ್ಪನೆಯ ಪೂರ್ವ ಸ್ಥಿತಿಯೆಂದು ತಿಳಿಯಬಹುದು. ಅದರಂತೆ ಆಯಾ ಭೌಗೋಳಿಕ ಪರಿಸರದಲ್ಲಿ ವಾಸಿಸುವ ಸಮುದಾಯಗಳ ನೆಲೆಗಳು ಆರಂಭವಾದವು. ಈ ನೆಲೆಗಳನ್ನು ಗುರುತಿಸುವ ಸಲುವಾಗಿ ಒಂದು ಹೆಸರಿನ ಅಗತ್ಯ ತೋರಿಬಂದಿತು. ಈ ಅಗತ್ಯವೇ ನೆಲೆಗಳಿಗೆ ಹೆಸರಿಸುವ ಗ್ರಾಮ. ಸ್ಥಳನಾಮಗಳು ಆರಂಭವಾದುದರ ಕುರುಹು ಎನ್ನಬಹುದು. ಆಯಾ ಪ್ರಾದೇಶಿಕ ಮಟ್ಟದಲ್ಲಿ ನೆಲೆಸುವ ಸಮುದಾಯಗಳು ಆರಂಭದಲ್ಲಿ ಪ್ರಾಕೃತಿಕ ಪರಿಸರದ ಪರಂಪರೆಯೊಂದಿಗೆ ತಮ್ಮ ನೆಲೆಗಳಿಗೆ ಹೆಸರುಗಳನ್ನು ಕರೆದುಕೊಂಡರು.[೧] ಬೆಟ್ಟ, ಗುಡ್ಡ, ಗಿಡ, ಮರ, ಕಲ್ಲು, ಮಣ್ಣು ಇವುಗಳ ಗಾಢ ಸಂಬಂಧವು ಹೆಸರುಗಳಿಗೆ ಪ್ರೇರೇಪಿಸಿರಬೇಕು. ಹೆಚ್ಚಾಗಿ ಸಮುದಾಯಗಳು ವಾಸಿಸುತ್ತಿದ್ದುದು ಬೆಟ್ಟಗಳ ಅಂಚಿನಲ್ಲಿ, ದಿನ್ನೆ ಪ್ರದೇಶಗಳಲ್ಲಿ ಮತ್ತು ತಮಗೆ ಅಗತ್ಯವಾಗಿ ಬೇಕಾದಂತಹ ನೀರಿನ ತಾಣಗಳಲ್ಲಿ, ಜಗತ್ತಿನ ಬಹುತೇಕ ಪ್ರಾಚೀನ ನಾಗರೀಕತೆಗಳು ಆರಂಭವಾದದ್ದು ನದಿ ದಂಡೆಯ ಮೇಲೆ ಎಂಬುದನ್ನು ಗಮನಿಸಿದರೆ ಸಮುದಾಯಗಳ ನೆಲೆಸುವಿಕೆಯ ಆಯ್ಕೆಯು ಸ್ಪಷ್ಟವಾಗಿ ಗೋಚರಿಸುತ್ತದೆ. ಅಂತೆಯೇ ಪಶುಪಾಲನೆ ಮತ್ತು ಕುರಿ ಸಾಕಣಿಕೆಯು ಬೆಟ್ಟ ಗುಡ್ಡಗಳಲ್ಲಿ ಬೆಟ್ಟದ ಬದಿಯಲ್ಲಿ ಅನುಕೂಲಕರವಾಗಿತ್ತು. ಈ ವೃತ್ತಿಯೊಂದಿಗೆ

ತಮ್ಮ ವಾಸದ ನೆಲೆಗಳನ್ನು ಅಲ್ಲಲ್ಲಿಯೇ ನಿರ್ಮಿಸಿಕೊಂಡರು.[೨] ಈ ಕಾರಣದಿಂದಾಗಿ ಪ್ರಕೃತಿಯ ಗಾಢ ಸಂಬಂಧದೊಂದಿಗೆ ತಳಕು ಹಾಕಿಕೊಂಡ ಮಾನವರು ಆರಂಭಿಕ ಹಂತದಲ್ಲಿ ಪ್ರಕೃತಿನಿಷ್ಠ ಗ್ರಾಮನಾಮಗಳ ಉದಯಕ್ಕೆ ನಾಂದಿಯಾದವು. ಹೀಗೆ ಗ್ರಾಮಸಮಾಜಗಳು ಆರಂಭವಾದವು. ಸ್ಥಳನಾಮಗಳ ಅಧ್ಯಯನ ಅರ್ಥಗರ್ಭಿತವೆಂತಲೂ, ಅವುಗಳ ಮೂಲರೂಪದಿಂದ ಅರ್ಥನಿರ್ಣಯ ಸಾಧ್ಯವೆಂದೂ ಜಗತ್ತಿಗೆ ಮೊದಲಬಾರಿಗೆ ತೋರಿಸಿಕೊಟ್ಟ ಕೀರ್ತಿ ಜರ್ಮನಿಯ ಗಾಟ್ ಫ್ರೀಡ್ ವಿಲ್ ಹೆಲ್ಮ್ ವಿಬ್ನಿಜ್ ಎಂಬುವವನಿಗೆ ಸಲ್ಲುತ್ತದೆ. ಅವನ ಆಸಕ್ತಿ, ಉದ್ದೇಶ, ಶ್ರಮದ ಪರಿಣಾಮವಾಗಿಯೇ ವಿಬ್ನಿಜ್ ಅವರನ್ನು ಸ್ಥಳನಾಮಶಾಸ್ತ್ರ ಪಿತಾಮಹನೆಂದು ಕರೆಯಲಾಗುತ್ತದೆ.[೩]

ಇಂಗ್ಲೀಷ್ ಭಾಷೆಯಲ್ಲಿ ಗ್ರಾಮನಾಮಕ್ಕೆ ಟೊಪಾನಮಿ (Toponomy) ಎಂದು ಹೆಸರು. ಇದು ಮೂಲತಃ ಗ್ರೀಕ್‌ನ Topos+Nomos ಎಂಬೆರಡು ಸಂಯುಕ್ತ ಪದಗಳಿಂದ ಬಂದದ್ದಾಗಿದೆ. ಇದರ ಅರ್ಥ ಒಂದು ಪ್ರದೇಶದ ಸ್ಥಳಗಳ ಹೆಸರುಗಳು, ಗ್ರಾಮನಾಮದ ಊರ ಹೆಸರುಗಳೆಂದಿದೆ. ಇದನ್ನೆ ಗ್ರಾಮನಾಮ ವಿದ್ವಾಂಸರು Topos ಅಂದರೆ Place ಎಂದೂ, Nomos ಅಂದರೆ ಅಧ್ಯಯನ ಎಂದು ಅರ್ಥೈಸಿದ್ದಾರೆ. ಹಾಗಾದರೆ Toponomy ಎಂಬುದು ಸ್ಥಳದ ಕ್ಷೇತ್ರದ ಅಧ್ಯಯನ ಎಂದು ಹೇಳಬಹುದು.[೪]

ಪ್ರಕೃತಿ ನಿಷ್ಟ ಸ್ಥಳನಾಮಗಳ ಎರಡನೇ ಹಂತವು ಭೌಗೋಳಿಕ ಚಹರೆಗಳಿಂದ ಭಿನ್ನವಾಗಿ, ಸಮುದಾಯ ನಿಷ್ಠವಾಗಿರುವುದು ತಿಳಿದುಬರುತ್ತದೆ. ಅಂದರೆ ಗ್ರಾಮಗಳಿಗೆ, ಸ್ಥಳಗಳಿಗೆ ಹೆಸರಿಡುವಾಗ ತಮ್ಮ ಜನಾಂಗದ ವ್ಯಕ್ತಿಗಳ, ಚಾರಿತ್ರಿಕ ವ್ಯಕ್ತಿಗಳ, ಧಾರ್ಮಿಕ ವ್ಯಕ್ತಿಗಳ ಹೆಸರುಗಳನ್ನು ಕೊಡಲು ಮುಂದಾದದ್ದು ಗ್ರಾಮನಾಮಗಳ ಇತಿಹಾಸದಿಂದ ತಿಳಿಯುತ್ತದೆ. ಮುಂದೆ ಅದು ಕಾಲಾಂತರ ಬದಲಾವಣೆ, ಆಯಾ ಕಾಲದ ಸಮಕಾಲೀನ ಸಾಮಾಜಿಕ ಜೀವನವನ್ನು ಅವಲಂಬಿಸಿ **'ಹೆಸರಿಡುವಿಕೆಯು'** ಸ್ಥಿತ್ಯಂತರಕ್ಕೊಳಗಾಯಿತು. ಗ್ರಾಮಸಮುದಾಯಗಳು ಆರಂಭದಲ್ಲಿ ನಿಸರ್ಗವಾಚಿಯೊಂದಿಗೆ ಹೆಸರುಗಳನ್ನು ಕರೆದುಕೊಂಡು ಕ್ರಮೇಣ ಜನಾಂಗವಾಚಿ, ವ್ಯಕ್ತಿವಾಚಿ ಮುಂತಾದವು. ಈ ಮೂರು ಕಾಲಘಟ್ಟದಲ್ಲಿ ಒಂದು ಸ್ಥಳಕ್ಕೆ ಹೆಸರಿಡುವ ಕ್ರಮದಲ್ಲಿ ಅನೇಕ ಬಗೆಯ ಬದಲಾವಣೆಗಳಾದವು.

ವಸ್ತು, ವ್ಯಕ್ತಿ, ಪ್ರಾಣಿ–ಪಕ್ಷಿಗಳ ಹೆಸರನ್ನು ಸೂಚಿಸುವ ಪದಕ್ಕೆ ನಾಮಪದ ಎನ್ನುತ್ತೇವೆ. ಇದರಲ್ಲಿ ರೂಢನಾಮ, ಅಂಕಿತನಾಮ, ಅನ್ವರ್ಥನಾಮ ಎಂಬ ಅನೇಕ ಪ್ರಭೇದಗಳಿವೆ. ಅಂಕಿತನಾಮ ವ್ಯಕ್ತಿ, ಪ್ರಾಣಿ–ಪಕ್ಷಿಗಳ ಸ್ಥಳಗಳು ಬಹುಸಂಖ್ಯೆಯಲ್ಲಿದ್ದಾಗ ಅಥವಾ ಅತಿ ಬಳಕೆಯಲ್ಲಿದ್ದಾಗ ಅಂತಹ ಅಂಕಿತನಾಮಗಳು ಸಾಮಾನ್ಯವಾಗಿ ಮಟ್ಟಕ್ಕಿಳಿಯುತ್ತವೆ. ಸ್ಥಳನಾಮಗಳು ಸಾಮಾನ್ಯವಾಗಿ ಅಂಕಿತನಾಮಗಳಾಗುತ್ತವೆ.[೫]

ಪ್ರಸ್ತುತ ಅಧ್ಯಯನಕ್ಕಾಗಿ ಚಳ್ಳಕೆರೆ ಕಸಬಾ ಹೋಬಳಿಯ ಸ್ಥಳನಾಮಗಳನ್ನು ಅವುಗಳಲ್ಲಿಯ ಅಂಶಗಳನ್ನು ಆಧರಿಸಿ ಎರಡು ವಿಧಗಳಲ್ಲಿ ಅಧ್ಯಯನ ಮಾಡಲಾಗಿದೆ. ಅವುಗಳನ್ನು ಈ ಕೆಳಗಿನಂತೆ ನೋಡಬಹುದಾಗದೆ.

**ಪ್ರಕೃತಿವಾಚಿ ಸ್ಥಳನಾಮಗಳು**

* ಜಲವಾಚಿ ಸ್ಥಳನಾಮಗಳು
* ಬೆಟ್ಟ-ಗುಡ್ಡವಾಚಿ ಸ್ಥಳನಾಮಗಳು
* ಸಸ್ಯವಾಚಿ ಸ್ಥಳನಾಮಗಳು
* ವಸ್ತುವಾಚಿ ಸ್ಥಳನಾಮಗಳು
* ಪ್ರಾಣಿವಾಚಿ ಸ್ಥಳನಾಮಗಳು

**ಸಾಂಸ್ಕೃತಿಕ ಸ್ಥಳನಾಮಗಳು**

* ವ್ಯಕ್ತಿವಾಚಿ ಸ್ಥಳನಾಮಗಳು
* ಜಾತಿವಾಚಿ ಸ್ಥಳನಾಮಗಳು
* ದೈವವಾಚಿ ಸ್ಥಳನಾಮಗಳು

ಪ್ರಸ್ತುತ ಅಧ್ಯಯನಕ್ಕಾಗಿ ಚಳ್ಳಕೆರೆ ಕಸಬಾ ಹೋಬಳಿಯ ಸ್ಥಳನಾಮಗಳನ್ನು ರೇಖಾಚಿತ್ರ ಮೂಲಕ ವಿವರಿಸಲಾಗಿದೆ.

| | |
|---|---|
| ೧. ಸಮುದ್ರ ವಾರ್ಗಿಕ ಹೊಂದಿರುವ ಗ್ರಾಮಗಳು | ಬೊಮ್ಮಸಮುದ್ರ |
| ೨. ಕುಂಟೆ ವಾರ್ಗಿಕ ಹೊಂದಿರುವ ಗ್ರಾಮಗಳು | ಕಮ್ಮತ್ ಮರಿಕುಂಟೆ, ಹುಲಿಕುಂಟೆ, ಮರಿಕುಂಟೆ, ಜಡೆಕುಂಟೆ, ವಿಡುಪನಕುಂಟೆ |
| ೩. ಕೆರೆ ವಾರ್ಗಿಕ ಹೊಂದಿರುವ ಗ್ರಾಮಗಳು | ಸಾಣಿಕೆರೆ |
| ೪. ಸಾಗರ ವಾರ್ಗಿಕ ಹೊಂದಿರುವ ಗ್ರಾಮಗಳು | ಮುಮ್ಮಡಿ ಸಾಗರ, ಭರಮಸಾಗರ |
| ೫. ಜಾತಿವಾಚಿ ಸ್ಥಳನಾಮಗಳು | ವಡೇರಹಳ್ಳಿ, ಗೊಲ್ಲರಹಟ್ಟಿ ಉಪ್ಪಾರಹಳ್ಳಿ, ರೆಡ್ಡಿಹಳ್ಳಿ |
| ೬. ದೈವವಾಚಿ ಹೊಂದಿರುವ ಗ್ರಾಮಗಳು | ಲಕ್ಷ್ಮೀಪುರ, ನಾರಾಯಣಪುರ |

ಮಾನವ ಪ್ರಕೃತಿಯೊಂದಿಗೆ ಸಹಜವಾಗಿ ಬದುಕುತ್ತಿರುವ ಸಂದರ್ಭದಲ್ಲಿ ಕಲ್ಲು, ಬೆಟ್ಟ, ಗುಡ್ಡ, ಗಿರಿಗಳಲ್ಲಿ ನೆಲೆ ಮಾಡಿಕೊಂಡಿದ್ದ. ಆಸರೆಗಳನ್ನು ಗುರುತಿಸುವ ಸಂದರ್ಭದಲ್ಲಿ ಆ ಕಲ್ಲು ಗುಡ್ಡಗಳಿಂದಲೇ ಹೆಸರಿಸಲು ಪ್ರಾರಂಭಿಸಿದರು.

## ೩.೨. ಪ್ರಕೃತಿವಾಚಿ ಸ್ಥಳನಾಮಗಳು

### ಜಲವಾಚಕ ಸ್ಥಳನಾಮಗಳ ವಿಶ್ಲೇಷಣೆ

ಮಾನವ ಸಂಸ್ಕೃತಿಯ ವಿಕಾಸದ ಹಂತದಲ್ಲಿ 'ನೀರಿಗೆ' ಪ್ರಮುಖವಾದ ಸ್ಥಾನವಿದೆ. ಜಗತ್ತಿನ ಬಹುತೇಕ ನಾಗರಿಕತೆಗಳೆಲ್ಲವೂ ನದಿಯ ದಂಡೆಯ ಮೇಲೆ ಜೀವನ ಆರಂಭಿಸಿದವರೆಂದು ತಿಳಿಯುತ್ತದೆ. ನದಿ, ಪರಿಸರ, ಕೆರೆ, ಹಳ್ಳ, ಕೊಳ್ಳ, ಕುಂಟೆ, ಬಂಡೆ, ಸಮುದ್ರಗಳಂತಹ ಜಲಚರ ಜಲಸಂಗ್ರಾಹಕಗಳನ್ನು ನಿರ್ಮಿಸಿಕೊಂಡು ಗ್ರಾಮಗಳನ್ನು ನಿರ್ಮಿಸಿಕೊಂಡರು.

ಬೊಮ್ಮ ಸಮುದ್ರ: ಇದು ಜಲವಾಚಿಯಾಗಿದ್ದು ಈ ಊರಿನ ಕೆರೆಗೆ ಭರಮಸಾಗರ ನೀರು ಬರೋದರಿಂದ ಈ ಊರಿಗೆ ಬೊಮ್ಮಸಮುದ್ರ ಎಂದು ಕರೆದಿರಬಹುದು. ಮೀರಾಸಾಬಿಹಳ್ಳಿ ದೊಡ್ಡೇರಿಗೆ ಹತ್ತಿರವಿರುವ ಶಾಸನದಿಂದ ಈ ಗ್ರಾಮದ ಪಡುವ ದಿಕ್ಕಿನಲ್ಲಿರುವ ಬೀರೆದೇವರಿಗೆ ದಾನಕೊಟ್ಟ ಉಲ್ಲೇಖವಿದೆ.

ಬೊಮ್ಮ + ಸಮುದ್ರ = ಬೊಮ್ಮಸಮುದ್ರ

ವಿಡುಪನಕುಂಟೆ: ಕನ್ನಡದಲ್ಲಿ 'ಬಿಡು' ಅಥವಾ ವಿರಾಮ ಎಂದರ್ಥ ತೋರುತ್ತದೆ. ಈ ಊರು ಒಂದು ವಿರಾಮಕ್ಕೆ ನಿರ್ದಿಷ್ಟ ಭೂಪ್ರದೇಶವಾಗಿರಬಹುದು. ಹಾಗಾಗಿ ವಿಡುಪನಕುಂಟೆ ಎಂದು ಕರೆಯುತ್ತಾರೆ. ರಾಣಿಕೆರೆ ಮತ್ತು ಮತ್ಸಮುದ್ರದ ವೇದಾವತಿ ತೊರೆಗಳ ಮಧ್ಯವಿರುವ ಈ ಗ್ರಾಮ ನೀರಾವರಿಗೆ ಅನುಕೂಲವಿದೆ.

ವಿಡುಪನ + ಕುಂಟೆ = ವಿಡುಪನ ಕುಂಟೆ

ಭರಮಸಾಗರ: ಈ ಗ್ರಾಮವು ಚಿತ್ರದುರ್ಗ ಜಿಲ್ಲೆಯ ಇದೇ ಹೆಸರಿನ ಎರಡು ಮೂರು ಗ್ರಾಮಗಳಿವೆ. ಭರಮಣ್ಣನಾಯಕನ ಹೆಸರಿನಲ್ಲಿ ಕಟ್ಟಲಾದಂತಹ ಒಂದು ಭರಮಸಾಗರವಿದೆ. ಆದುದರಿಂದ ಭರಮಸಾಗರ 'ಸಾಗರ' ಸಮುದ್ರ ಎಂದು ಬಲಗಡೆಗೆ ರಾಣಿಕೆರೆ ಇರುವುದರಿಂದ ಭರಮಸಾಗರ ಎಂತಲೂ ಸಹ ಕರೆಯುತ್ತಾರೆ.

ಭರಮ + ಸಾಗರ = ಭರಮಸಾಗರ

### ಬೆಟ್ಟ-ಗುಡ್ಡವಾಚಿ ಸ್ಥಳನಾಮಗಳು

ಬೆಟ್ಟ-ಗುಡ್ಡಗಳ ಆಶ್ರಯದಲ್ಲಿ ಕಟ್ಟಿಕೊಂಡ ಊರುಗಳನ್ನು ಆ ಸ್ಥಿತಿಯನ್ನು ಸೂಚಿಸುವ ವಾರ್ಗಿಕವಾಗಿ ಬೆಟ್ಟ-ಗುಡ್ಡವನ್ನು ಬಳಸಿಕೊಂಡಿರುವ ಸ್ಥಳನಾಮಗಳನ್ನು ಕಾಣಬಹುದು.

ಪಗಡಲಬಂಡೆ: ಅಗಲವಾದ ಬಂಡೆ ಎಂದರ್ಥ. ಸುಮಾರು ೫೦ ಅಡಿ ಬಂಡೆ ಇದ್ದುದರಿಂದ ಪಗಡಲಬಂಡೆ ಎಂದು ಹೆಸರಾಗಿದೆ. ಇಲ್ಲಿ ದೊಡ್ಡ ಬೋರಪ್ಪನಗುಡಿ ಇದೆ. ದಾರಿಯ ಗುಡ್ಡದಲ್ಲಿ ಒಂದು ಬಾವಿಯಿದ್ದು ಅದರಲ್ಲಿ ಯಾವಾಗಲೂ ನೀರು ಬತ್ತುವುದಿಲ್ಲವಂತೆ. ಇದೇ ಊರಿನಂತೆ ಹೆಸರು ಬಂದಿರುವ ಜಾಜೂರಿನ ಬಳಿ ಸೋಮಪನ ಬಂಡೆ ಎನ್ನುವ ಕರಿಕಲ್ಲಿನ ಗುಡ್ಡವಿದೆ.[೬]

**ಪ್ರಾಣಿವಾಚಕ ಸ್ಥಳನಾಮಗಳು**

ಪ್ರಾಣಿ–ಪಕ್ಷಿಗಳು ಪ್ರಕೃತಿಯಲ್ಲಿ ತಮ್ಮದೇ ಆದ ಸ್ಥಾನವನ್ನು ಪಡೆದುಕೊಂಡಿವೆ. ಮಾನವ ತನ್ನ ಜೀವನದೊಂದಿಗೆ ಬದುಕುವ ಅಥವಾ ತಮಗೆ ಅತಿಮಾನುಷವೆಂದು ತೋರುವ ಪ್ರಾಣಿ–ಪಕ್ಷಿಗಳ ಹೆಸರನ್ನು ತಮ್ಮ ವಾಸದ ನೆಲೆಗಳಿಗೆ ನಿರ್ದೇಶಿಸಿರುತ್ತಾರೆ. ಈ ಪರಿಸರದಲ್ಲಿ ಕಂಡುಬರುವ ಸ್ಥಳನಾಮಗಳೆಂದರೆ ಉದಾ. ಹುಲಿಕುಂಟೆ.

**೩.೩. ಸಾಂಸ್ಕೃತಿಕ ಸ್ಥಳನಾಮಗಳು**

ಸ್ಥಳನಾಮಗಳು ಸಂಸ್ಕೃತಿಯ ಅಧ್ಯಯನದಲ್ಲಿ ಪ್ರಮುಖ ಆಕರಗಳಾಗಿವೆ. ಒಂದು ಹೆಸರಿನಲ್ಲಿ ಮತ್ತೊಂದು ಹೆಸರಿನ ಜೀವನದ ಭವಿಷ್ಯವಿರುತ್ತದೆ. ಅಥವಾ ಜೀವನಕ್ರಮ ಇರುತ್ತದೆ. ನೇರವಾಗಿ ಜೀವನಕ್ರಮ ಹೇಳುತ್ತಿಲ್ಲವಾದ ಪರೋಕ್ಷ ನೆಲೆಯಲ್ಲಿ ತೆರೆದು ತೋರಿಸುವ ಮೂಲಾಧಾರವಾಗಿ ಸ್ಥಳನಾಮಗಳು ಮಹತ್ವವೆನಿಸಿವೆ. ಸಾಮಾಜಿಕ ಚಹರೆ ಮತ್ತು ಸಾಂಸ್ಕೃತಿಕ ಚಹರೆಗಳ ಅಧ್ಯಯನ ಮಾಡುವಲ್ಲಿ ಸ್ಥಳನಾಮಗಳು ಸಾಮಾಜಿಕ ಸಾಂಸ್ಕೃತಿಕ ಚಹರೆಗಳ ಅಧ್ಯಯನ ಮಾಡುವಲ್ಲಿ ಸ್ಥಳನಾಮಗಳು ಪ್ರಾಮಾಣಿಕವಾಗಿ ಸಾಂಸ್ಕೃತಿಕ ಪ್ರಜ್ಞೆಯುಳ್ಳ ವ್ಯಕ್ತಿಗಳು ಮತ್ತು ಸಮಾಜದಲ್ಲಿ ಸ್ಥಳನಾಮಗಳನ್ನು ಪ್ರಮುಖ ಆಕರಗಳೆಂದು ಭಾವಿಸಿದ್ದು ವಾಸ್ತವತೆಯ ತಳಹದಿಯು ಸಂಸ್ಕೃತಿಯ ಅಧ್ಯಯನಕ್ಕೆ ತೊಡಗಲು ಸಾಧ್ಯವಿರುತ್ತದೆ.

**ವ್ಯಕ್ತಿವಾಚಿ ಸ್ಥಳನಾಮಗಳು**

ವ್ಯಕ್ತಿವಾಚಿ ಸ್ಥಳನಾಮಗಳು ಸಾಮಾಜಿಕ ಅಧ್ಯಯನದ ಮುಖ್ಯ ಆಕರಗಳಲ್ಲಿ ಒಂದು ಎಂದು ಪರಿಗಣಿಸಬಹುದು. ಈ ಆಕರಗಳನ್ನು ಇಟ್ಟುಕೊಂಡು ವಿಶ್ಲೇಷಣೆಗೆ ಒಳಪಡಿಸಿದಲ್ಲಿ ಒಂದು ಸಂಸ್ಕೃತಿಯ ಸಂಗತಿಗಳನ್ನು ಬಿಡಿಬಿಡಿಯಾಗಿ ತಿಳಿಯಲು ಅನೇಕ ವಿಧಾನಗಳಲ್ಲಿ ವ್ಯಕ್ತಿನಾಮಗಳು ಅಭ್ಯಾಸವೂ ಒಂದು. ಒಂದು ಪ್ರದೇಶದಲ್ಲಿ ಆ ಪರಿಸರಕ್ಕೆ ತಕ್ಕಂತೆ ಮನುಷ್ಯನ ಆಲೋಚನಾ ವಿಧಾನ ಜೀವನ ಶೈಲಿಯು ಅನೇಕ ಸ್ಥಿತ್ಯಂತರ ಪ್ರಕೃತಿಗೆ ಒಳಪಡುತ್ತಲೇ ಇರುತ್ತವೆ. ಹಾಗೂ ಭೌಗೋಳಿಕ ಪರಿಸರದ ಮೇಲೆ ವಿಶೇಷವಾಗಿ ಪ್ರಭಾವ ಬಿರುತ್ತೆನ್ನಬಹುದು. ಸಮಾಜದಲ್ಲಿ ಯಾವುದೇ ಕಾರ್ಯಕ್ಕೆ ವಿಶೇಷವಾದ ಘಟನೆಯಿಂದ ಹೆಸರಾದ ವ್ಯಕ್ತಿಯ ಸ್ಥಳನಾಮಗಳು ಒಂದೊಂದು ಗ್ರಾಮಕ್ಕೆ ಕರೆದರು. ಮುಂದೆ ಸ್ತ್ರೀ ಮತ್ತು ವ್ಯಕ್ತಿಯಾಗಿ ಐತಿಹಾಸಿಕ, ಸಾಮಾಜಿಕ, ರಾಜಕೀಯ ಇತ್ಯಾದಿ ಕಾರಣಗಳಿಂದ ವ್ಯಕ್ತಿವಾಚಿ ಸ್ಥಳನಾಮಗಳಿಗೆ ನಾವು ನಿರ್ದೇಶನ ನಡೆಯಿತು.

**ಪುರುಷವಾಚಕ ಸ್ಥಳನಾಮಗಳು**

* ಸಿದ್ದಾಪುರ
* ಸೋಮಗುದ್ದು
* ಮೀರಾಸಾಬಿಹಳ್ಳಿ

* ಹೊಟ್ಟೆಪನಹಳ್ಳಿ

* ತಿಮ್ಮನಹಳ್ಳಿ

**ಹೊಟ್ಟೆಪನಹಳ್ಳಿ:** ಹೊಟ್ಟೆಪ–ವ್ಯಕ್ತಿವಾಚಿ. ಹೊಟ್ಟೆಪನಾಯಕನ ಹೆಸರಿನಲ್ಲಿ ಕಟ್ಟಲಾದ ಈ ಗ್ರಾಮವನ್ನು ಹೊಟ್ಟೆಪನ ಹಳ್ಳಿ ಎಂದು ಕರೆಯುತ್ತಾರೆ. ಇಲ್ಲಿ ಉಜ್ಜಿನಿ ಸಿದ್ದೇಶ್ವರಸ್ವಾಮಿ ದೇವಾಲಯವಿದೆ. ಇಲ್ಲಿಗೆ ಸಮೀಪದ ಗೊಲ್ಲರಹಟ್ಟಿಯಲ್ಲಿ ಆಗಾಗ ಗೊಲ್ಲಾಳಮ್ಮ ಜಾತ್ರೆ ನಡೆಯುತ್ತದೆ. ವಿಶೇಷವೆಂದರೆ ಗೊಲ್ಲರಹಟ್ಟಿಯ ಗೋಕುಲಗಳಲ್ಲಿ ರಾಸುಗಳಿಗಿಂತ ಹೆಚ್ಚು ಹೊಂದಿದ್ದರೆ ಕಡ್ಡಾಯವಾಗಿ ಒಂದು ರಾಸನ್ನು ೨೫ ಬೇಟೆ, ೧೨ ದವಸ ಸೇರಿದರೆ ಮಾತ್ರ ಜಾತ್ರೆ ನಡೆಯುತ್ತದೆ.

ಹೊಟ್ಟೆಪ್ಪ + ನ + ಹಳ್ಳಿ = ಹೊಟ್ಟೆಪನಹಳ್ಳಿ.

**ಸೋಮಗುದ್ದು:** ಚಳ್ಳಕೆರೆ ಟೌನಿನಿಂದ ೨–೩ ಮೈಲಿ ದೂರದಲ್ಲಿರುವ ಗ್ರಾಮ. ಸೋಮ ಎಂಬುವನು ಗುದ್ದಲಿ ಹಿಡಿದು ಮೊದಲು ಊರು ಕಟ್ಟಿದ್ದರಿಂದ ಈ ಹೆಸರು ಬಂದಿದೆ. ಇನ್ನೊಂದು ಕತೆಯಂತೆ ಸೋಮೇಶ್ವರನು ಈ ಗ್ರಾಮಕ್ಕೆ ಬಂದಾಗ ಹಂದಿಯೊಂದು ಗುದ್ದಲು ಪ್ರಯತ್ನಿಸಿದಾಗ ಅವನು ಹೆದರಿ ಗುಹೆಯಲ್ಲಿ ಅಡಗಿದ್ದರಿಂದ ಸೋಮಗುದ್ದು ಎಂಬ ಹೆಸರು ಬಂದಿದೆ. ಸೋಮೇಶ್ವರನ ಗುಡಿ ಇದೆ. ಹಾಗೂ ಚಂದ್ರಗಿರಿಯ ಹೊಂಡ ಸಹ ಕಂಡುಬರುತ್ತದೆ.[೭]

ಸೋಮ + ಗುದ್ದು = ಸೋಮಗುದ್ದು.

**ಮೀರಾಸಾಬಿಹಳ್ಳಿ:** ಈ ಗ್ರಾಮದಲ್ಲಿ ಮಿರಸಾದಕ್ ಎನ್ನುವ ಮುಸಲ್ಮಾನ ನೆಲೆಸಿರುವುದರಿಂದ ಮೀರಾಸಾಬಿಹಳ್ಳಿ ಎಂದು ಕರೆಯುತ್ತಾರೆ. ಈ ಗ್ರಾಮದ ಪಕ್ಕದಲ್ಲಿ ರಾಣಿಕೆರೆ ಸಹ ಕಂಡುಬರುತ್ತದೆ.

ಮಿರ್ + ಸಾಬಿ = ಮಿರ್‌ಸಾಬಿಹಳ್ಳಿ>ಮೀರಾಸಾಬಿಹಳ್ಳಿ.

**ಜಾತಿವಾಚಿ ಸ್ಥಳನಾಮಗಳು**

ಆರಂಭದಲ್ಲಿ ಕೆಲವು ವೃತ್ತಿಗಳನ್ನವಲಂಬಿಸಿದ್ದ ಸಮುದಾಯಗಳಿಗೆ ಅವರ ವೃತ್ತಿಯಿಂದಲೇ ಗುರುತಿಸುವ ರೂಢಿಯು ಆರಂಭವಾಯಿತು. ಸಾಮಾಜಿಕ ಅಧ್ಯಯನದಲ್ಲಿ ಜಾತಿ ಮತ್ತು ವೃತ್ತಿಗಳು ಪ್ರಮುಖವಾದ ಪಾತ್ರವಹಿಸುತ್ತವೆ. ಜಾತಿಯು ಹುಟ್ಟಿನೊಂದಿಗೆ ಗುರುತಿಸಲ್ಪಡುತ್ತದೆ. ಅದು ನಿರ್ದಿಷ್ಟವಾಗಿ ಸ್ಥಳನಾಮಗಳನ್ನು ಸಮಾಜವನ್ನು ಬಿಂಬಿಸುತ್ತವೆ. ಲಿಖಿತ ಆಧಾರಗಳ ಕೊರತೆಯಿದ್ದಲ್ಲಿ, ಒಂದು ಜನಾಂಗವು ನೆಲೆಸಿದ್ದ, ಒಂದು ಪ್ರದೇಶದ ಸ್ಥಳನಾಮಗಳಲ್ಲಿನ ಸಮಾನ ರೂಪಗಳನ್ನು ಪರಿಶೀಲಿಸಬೇಕು. ಹೀಗಾಗಿ ಜಾತಿ, ವೃತ್ತಿಗಳು, ಪ್ರಾಚೀನ ಸಾಮಾಜಿಕ ಅಂಶಗಳನ್ನು ಗಮನಿಸಲು ಸ್ಥಳನಾಮಗಳು ಸಾಧ್ಯವಾಗುತ್ತದೆ. ಸ್ಥಳನಾಮಗಳು ಈ ರೀತಿಯ ಯಾವುದೇ ಸಾಮಾಜಿಕ ಅಂಶಗಳನ್ನು ಎಲ್ಲಾ ಸಂದರ್ಭದಲ್ಲಿಯೂ ನೇರವಾಗಿ ಬಿಂಬಿಸದಿದ್ದರೂ ಸಂಸ್ಕೃತಿ ಪಳಿಯುಳಿಕೆಯಂತಹ ಅವಶೇಷಗಳಾಗಿರುವುದರಿಂದ ಸಮಾಜ ಕುರಿತು ಅತ್ಯಂತ ಉಪಯುಕ್ತ ಮಾಹಿತಿಯನ್ನು ನೀಡುತ್ತದೆ.

ಚಳ್ಳಕೆರೆ ಕಸಬಾ ಹೋಬಳಿ ಸ್ಥಳನಾಮಗಳ ಅಧ್ಯಯನದಲ್ಲಿ ಜಾತಿವಾಚಿ ಸ್ಥಳನಾಮಗಳು ಇರುವುದನ್ನು ಈ ಕೆಳಗಿನಂತೆ ಗಮನಿಸಬಹುದು.

ವಡೇರಹಳ್ಳಿ: ಈ ಗ್ರಾಮದಲ್ಲಿ 'ವಡ್ಡ' ಜನಾಂಗ ಇರುವುದರಿಂದ 'ವಡ್ಡ' ಬದಲು ವಡೇರಹಳ್ಳಿ ಎಂದು ಹೆಸರು. ಈ ಗ್ರಾಮದಲ್ಲಿ ಬಸವೇಶ್ವರ ದೇವಾಲಯ ಸಹ ಕಂಡುಬಂದಿದೆ.[೮]

ವಡ್ಡರ + ಹಳ್ಳಿ = ವಡ್ಡರಹಳ್ಳಿ>ವಡೇರಹಳ್ಳಿ.

ಗೊಲ್ಲರಹಳ್ಳಿ: ಗೊಲ್ಲರು ಒಂದು ಜನಾಂಗದವರು ನೆಲೆಸಿದ್ದರಿಂದ ಗೊಲ್ಲರಹಳ್ಳಿ ಎಂದು ಹೆಸರು. ಗೊಲ್ಲರ + ಹಳ್ಳಿ = ಗೊಲ್ಲರಹಳ್ಳಿ.

ಉಪ್ಪಾರಹಳ್ಳಿ: ಉಪ್ಪಾರ ಅಥವಾ ಉಪ್ಪು ತಯಾರಿಸುವವರು ಒಂದು ಜನಾಂಗವಿದ್ದುದರಿಂದ ಉಪ್ಪಾರಹಳ್ಳಿ ಎಂದು ಕರೆಯುತ್ತಾರೆ.

ಉದಾ. ಉಪ್ಪಾರಹಟ್ಟಿ–ಉಪ್ಪಾರಹಳ್ಳಿ.

ರೆಡ್ಡಿಹಳ್ಳಿ: ತೆಲುಗಿನಲ್ಲಿ ರೆಡ್ಡಿಗಳು ಈ ಗ್ರಾಮದಲ್ಲಿ ನೆಲೆಸಿದ್ದರಿಂದ ರೆಡ್ಡಿಹಳ್ಳಿ ಎಂದು ಹೆಸರು ಬಂದಿದೆ.

ರೆಡ್ಡಿ + ಹಳ್ಳಿ = ರೆಡ್ಡಿಹಳ್ಳಿ.

ಯಾದಲಗಟ್ಟೆ: 'ಯಾದಲ' ಎಂದರೆ ಕೃಷ್ಣ ವಂಶಕ್ಕೆ ಸೇರಿದವರು ಎಂದರ್ಥ. ಈ ಗ್ರಾಮದ ಮೂಲ ನಿವಾಸಿಗಳು ಗೊಲ್ಲರು. ಗೊಲ್ಲರು ನೆಲೆಸಿದ ಸ್ಥಳವಾಗಿದ್ದರಿಂದ ಇದನ್ನು ಯಾದಲಕಟ್ಟೆ ಎಂದು ಕರೆಯುತ್ತಿದ್ದರು. ನಂತರ ಅನೇಕ ಪಂಗಡಗಳು ಬಂದು ನೆಲೆಸಿದ್ದರಿಂದ ಅಲ್ಲಿ ನೆಲೆಸಿದ ನಿವಾಸಿಗಳು ತೆಲುಗಿನಲ್ಲಿ ಯಾದಲು (ಗೊಲ್ಲಜನಾಂಗ) ಕಟ್ಟಾ (ಗುಂಪು) ಎಂದು ಕರೆಯಲಾಯಿತು.

ಯಾದಲ + ಗಟ್ಟೆ = ಯಾದಲಗಟ್ಟೆ > ಯಾದಲ + ಕಟ್ಟಾ = ಯಾದಲಕಟ್ಟೆ.

## ದೈವವಾಚಿ ಸ್ಥಳನಾಮಗಳು

ಸಮಾಜ ಸಂಸ್ಕೃತಿಯಲ್ಲಿ 'ದೇವರು' ಪಾತ್ರ ಭಿನ್ನವಾದುದು. ಜೀವನದ ಹಲವಾರು ಸಂಗತಿಗಳಲ್ಲಿ ದೈವದ ಮಹತ್ವವನ್ನು ಕಂಡುಕೊಳ್ಳುವುದು ನಮ್ಮ ಸಂಸ್ಕೃತಿಯ ಪರಂಪರೆಯಾಗಿ ಮುಂದುವರೆಯುತ್ತದೆ. ಹಾಗೆಯೇ ಗ್ರಾಮ, ಊರುಗಳ ಹೆಸರುಗಳಿಗೂ ದೇವರ ಹೆಸರನ್ನು ಇಡುವುದು ರೂಢಿಯಾಗಿದೆ. ಸಮುದಾಯಗಳು ತಾವು ನಂಬಿದ ಕುಲದೈವ, ಮನೆದೈವ, ಗ್ರಾಮದೇವತೆ, ಪ್ರಾದೇಶಿಕ ದೇವತೆ ಹೀಗೆ ಹಲವಾರು ದೇವರುಗಳು ತಮ್ಮ ನೆಲೆಗಳಿಗೆ ಇಟ್ಟುಕೊಂಡರೆ ಒಳ್ಳೆಯದೆಂದು ನಂಬುತ್ತಾರೆ.

ಲಕ್ಷ್ಮೀಪುರ: ಇಲ್ಲಿ ಪೋಲೇರಮ್ಮನ ಗುಡಿ ನಿರ್ಮಿಸಿದ್ದಾರೆ. 'ಲಕ್ಷ್ಮಿ' ಎಂಬ ಹೆಸರಿನೊಂದಿಗೆ ಈ ಊರಿನ ಹೆಸರನ್ನು ಲಕ್ಷ್ಮೀಪುರ ಎಂದು ನಿರ್ದೇಶಿಸಲಾಗಿದೆ.

**ನಾರಾಯಣಪುರ:** ಈ ಗ್ರಾಮದಲ್ಲಿ ಸತ್ಯನಾರಾಯಣಸ್ವಾಮಿ ದೇವಾಲಯ ಇರುವುದರಿಂದ ನಾರಾಯಣಪುರ ಎಂದು ಕರೆಯುತ್ತಾರೆ.

ನಾರಾಯಣ + ಪುರ = ನಾರಾಯಣಪುರ.

ಹೀಗೆ ದೇವರು ಪುರಾಣ ಪುರುಷರು, ಸಾಧು ಸಜ್ಜನರು, ತಪಸ್ವಿಗಳು ಮುಂತಾದವರು ನಮ್ಮ ಸಂಸ್ಕೃತಿಯಲ್ಲಿ ಜೀವನದ ಅನನ್ಯ ಭಾಗವಾಗಿ ಅದರಲ್ಲಿಯೂ ಸ್ಥಳನಾಮಗಳಿಗೆ ಹೆಸರುಗಳಾಗಿ ಬಂದಿರುವುದು ತಿಳಿಯುತ್ತದೆ. ದೈವವಾಚಿ ಸ್ಥಳನಾಮಗಳ ನಿರ್ದಿಷ್ಟ ಭಾಗದಲ್ಲಿ ಹೆಚ್ಚಾಗಿ ಸಂಸ್ಕೃತ ಪದಗಳು ಮತ್ತು ಸಂಸ್ಕೃತದಿಂದ ತದ್ಭವಗೊಂಡ ಪದಗಳು ಇವೆ. ಕರ್ನಾಟಕದ ಇತರ ಕಡೆ ಸ್ತ್ರೀ ದೇವತೆಗಳು ಸ್ಥಳನಾಮಗಳು ವಿರಳವಾಗಿಯೇ ಕಂಡುಬರುತ್ತಿವೆ.

**ವಾರ್ಗಿಕಗಳ ಬಳಕೆ**

ಸ್ಥಳನಾಮಗಳ ಉತ್ತರ ಘಟಕಗಳು (ವಾರ್ಗಿಕ) ಆ ಗ್ರಾಮದ ಖಚಿತ ಸ್ವರೂಪವನ್ನು ತಿಳಿಸುವುಗಳಾಗಿರುತ್ತವೆ. ವಾರ್ಗಿಕದ ಆಧಾರದಿಂದ ಒಂದು ಪ್ರದೇಶದ ಗ್ರಾಮಗಳನ್ನು ಕೆಲವೇ ಗುಂಪುಗಳಾಗಿ ವರ್ಗೀಕರಿಸಬಹುದು. ಇವುಗಳಲ್ಲಿ ನಿಸರ್ಗವಾಚಿ, ವಸತಿವಾಚಿ ಮತ್ತು ನಿರ್ಮಾಣವಾಚಿ ಈ ಮೂರು ಪ್ರಕಾರವಾಗಿ ವಿಂಗಡಿಸಬಹುದು.

ಪುರ–ಸಿದ್ದಾಪುರ, ಹಳ್ಳಿ–ಚೆನ್ನಗಾನಹಳ್ಳಿ, ಗೋಪನಹಳ್ಳಿ, ಕಸ್ತೂರಿ ತಿಮ್ಮನಹಳ್ಳಿ, ಕೆರೆ–ಸಾಣಿಕೆರೆ, ಕರೀಕೆರೆ, ಗೆರೆ–ನಗರಂಗೆರೆ, ಸಮುದ್ರ–ಬೊಮ್ಮಸಮುದ್ರ, ಸಾಗರ–ಭರಮಸಾಗರ.

**ಸಂಬಂಧವಾಚಕ ವಾರ್ಗಿಕವಾಗಿರುವ ಸ್ಥಳನಾಮಗಳು**

ಕನ್ನಡದಲ್ಲಿ ಸಂಬಂಧವಾಚಿ ಮೂಲತಃ ಸ್ತ್ರೀ, ಪುರುಷ ಸೂಚಿಗಳಾಗಿವೆ. ಇವು ವ್ಯಕ್ತಿನಾಮಗಳಲ್ಲಿ ವಾರ್ಗಿಕವಾಗಿ ಬಳಕೆಯಾಗುತ್ತವೆ. ಇವುಗಳ ವ್ಯಕ್ತಿವಾಚಕ ಸ್ಥಳನಾಮಗಳಲ್ಲಿ ಬಳಕೆಗೊಳ್ಳುತ್ತವೆ. ಆಗ ಪೂರ್ಣ ವ್ಯಕ್ತಿನಾಮಗಳು ಯಾವಾಗಲು ನಿರ್ದಿಷ್ಟ ಸ್ಥಾನದಲ್ಲಿ ಬಳಕೆಗೊಳ್ಳುತ್ತವೆ. ಹಾಗಾಗಿ ಸಂಬಂಧವಾಚಿಗಳು ಸ್ಥಳನಾಮಗಳಲ್ಲಿ ಯಾವಾಗಲು ನಿರ್ದಿಷ್ಟದ ಸ್ಥಾನದಲ್ಲೆ ಕಂಡುಬರುತ್ತವೆ. ಕೆಲವೊಂದು ಸ್ಥಳನಾಮಗಳಲ್ಲಿ ಸಂಬಂಧವಾಚಕಗಳಿಂದಲೆ ಪ್ರಾರಂಭವಾಗುವುದನ್ನು ಕಾಣುತ್ತೇವೆ. ಚಳ್ಳಕೆರೆ ತಾಲೂಕಿನ ಕಸಬಾ ಹೋಬಳಿಯ ಈ ಮಾದರಿಯ ಸ್ಥಳನಾಮಗಳು ಕಂಡುಬರುತ್ತವೆ. ಉದಾ. ಅಯ್ಯನಹಟ್ಟಿ, ಚಿತ್ರಯ್ಯನಹಟ್ಟಿ, ತಿಪ್ಪಯ್ಯನಹಟ್ಟಿ ಇತ್ಯಾದಿ.

**ಹಿರೇಮಧುರೆ:** ಗ್ರಾಮದ ಸ್ಥಳನಾಮ ಪುರಾತನ ಗ್ರಾಮ. ಹಿಂದೆ ಈ ಪ್ರದೇಶದಲ್ಲಿ ಶಾತವಾಹನರು, ರಾಷ್ಟ್ರಕೂಟರು ಆಡಳಿತ ನಡೆಸಿದ್ದರೆಂದು ಈ ಪ್ರದೇಶದ ಶಾಸನಗಳಿಂದ ತಿಳಿಯಬಹುದಾಗಿದೆ. ನೊಳಂಬ, ಪಲ್ಲವರ ಕಾಲದಲ್ಲಿ ಉನ್ನತ ಸ್ಥಿತಿಯಲ್ಲಿದ್ದ ಗ್ರಾಮ ಪಾಳೆಯಗಾರರ ಕಾಲದಲ್ಲಿ ಬಿಚ್ಚುಗತ್ತಿ ಭರಮಣ್ಣನಾಯಕನ ಪಾರುಪತ್ಯೆಗಾರ ಭೂಸಣ್ಣನು ಹಿರೇಮದಿರೆ ಗೌಡನಾದ ರಾಜಯ್ಯನಿಗೆ ಬದಲು ಭೂಮಿಯನ್ನು ಭೂದತ್ತಿ ನೀಡಿದನೆಂದು ತಿಳಿದುಬರುತ್ತದೆ. ಈ ಹಳ್ಳಿ

ಬಳಿ ಬೃಹತ್ ಶಿಲಾ ಸಮಾಧಿಗಳು, ಶಾತವಾಹನ ಕಾಲದ ಮಡಕೆ, ಕುಡಿಕೆಗಳು ದೊರೆತಿರುವುದು ಕಂಡುಬರುತ್ತದೆ.[೧೦]

ಹಿರೀ + ಮಧುರೆ = ಹಿರೀ ಮಧುರೆ.

**೩.೪. ಸ್ಥಳ ಪುರಾಣ**

ಇಂಗ್ಲಿಷಿನ 'ಮಿಥ್' ಪದವನ್ನು ನಮ್ಮಲ್ಲಿಯ ಪುರಾಣ ಪದಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. ಮಿಥ್ ಎನ್ನುವುದು ಗ್ರೀಕನ 'ಮಿಥೋನ್'ನಿಂದ ಬಂದಿದೆ. 'ಮಿಥೋನ್' ಎಂದರೆ ಕತೆ, ನೀತಿಕತೆ, ಮಾತು ಎಂದರ್ಥ. ಗ್ರೀಕರಿಗೆ ಮಿಥೋಸ್ ಎಂಬುದು ಸತ್ಯ ಅಥವಾ ವಾಸ್ತವತೆ ಎರಡನ್ನೂ ಹೇಳಿದ್ದಾರೆ.[೧೧]

ಜನರು ನಂಬುವಂತೆ ಪುರಾಣವು ಬಹು ಹಿಂದಿನ ಕಾಲದಲ್ಲಿ ನಡೆದುಹೋದ ನೈಜ ಘಟನೆ ಪುರಾಣಗಳನ್ನು ಅತ್ಯಂತ ಪವಿತ್ರ ನಂಬುಗೆಯೊಂದಿಗೆ ನೈಜವಾಗಿ ಘಟನೆಗೆ ಘಟಿಸಿದ ಘಟನೆಗಳೆಂದು ಜನರು ತಿಳಿದಿದ್ದಾರೆ. ಧರ್ಮಕ್ಕೂ, ಪುರಾಣಕ್ಕೂ ಅನ್ಯೋನ್ಯವಾದ ಸಂಬಂಧವನ್ನು ಕಲ್ಪಿಸುವ ಜನ, ಪುರಾಣವನ್ನು ಹೆಚ್ಚು ಕಡಿಮೆ ಧರ್ಮದ ರೂಪವನ್ನು ಲೇಪಿಸಿ ಆಚರಣೆಯಲ್ಲಿ ಅಳವಡಿಸಿಕೊಂಡಿರುತ್ತಾರೆ. ಹೀಗಾಗಿ ಜನ ಜೀವನವನ್ನು ಪುರಾಣಗಳಿಗೂ ಬಿಡಸಲಾರದ ಸಂಬಂಧವಿದ್ದು, ಜನಸಾಮಾನ್ಯರ ಬದುಕಿನ ಮೇಲೆ ಪುರಾಣಗಳು ಅತ್ಯಂತ ಗಾಢವಾದ ಪರಿಣಾಮಗಳನ್ನು ಬೀರಿದೆ.

ಮನುಷ್ಯ ಎಂದು ಪ್ರಕೃತಿಯನ್ನು ತನ್ನ ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದನೋ ಅಂದೇ ಅವನಲ್ಲಿ ಪೌರಾಣಿಕ ಕಲ್ಪನೆಗಳು ಹುಟ್ಟಿಕೊಂಡಿತು. ಆತ ದೇವರನ್ನು ಸೃಷ್ಟಿ ಮಾಡಿ ತನ್ನ ಸಾಮರ್ಥ್ಯಕ್ಕೆ ಮೀರಿದ್ದನ್ನು ಕುರಿತು ತನ್ನಿಂದಲೇ ಉಂಟಾಗುವ ಪ್ರಶ್ನೆಗೆ 'ದೇವರು' ಎಂಬ ಶಕ್ತಿಯಲ್ಲಿ ಉತ್ತರ ಹುಡುಕಿಕೊಂಡ. ದೇವರನ್ನು ಮುಂದೆ ಇಟ್ಟುಕೊಂಡು ತನಗೆ ಹೊಳೆದ ಅನೇಕ ವೈಜ್ಞಾನಿಕ ಅನುಮಾನಗಳಿಗೆ, ಊಹೆಗಳಿಗೆ ಉತ್ತರವನ್ನು ಕಂಡುಕೊಳ್ಳಲು ಪ್ರಯತ್ನಿಸಿದ ಫಲವಾಗಿಯೇ ಸತ್ಯವನ್ನು ಅನಂತ ಸುರಳಿಯಲ್ಲಿ ಸುತ್ತಿಕೊಂಡ ಪುರಾಣ ಕಲ್ಪನೆಗಳು ಚಿಗುರೊಡೆದವು ಎಂದು ತೋರುತ್ತದೆ.[೧೨]

ಇತಿಹಾಸ ಪೂರ್ವಯುಗಕ್ಕೆ ಸಂಬಂಧಿಸಿದ್ದು ಎಂದು ಭಾವಿಸಲಾದ ವಿಶ್ವಸೃಷ್ಟಿ ಜನಾಂಗದ ಸೃಷ್ಟಿ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಕಥೆಗಳು ಪ್ರಚಲಿತವಾಗಿವೆ. ಈ ಕಥೆಗಳಲ್ಲಿನ ಸೃಷ್ಟಿ ಕಾರ್ಯ ದೇವರು, ದೈವಿಕ ವ್ಯಕ್ತಿ ಅಥವಾ ಸಾಂಸ್ಕೃತಿಕ ನಾಯಕರಿಂದ ನಡೆದಿರುತ್ತದೆ.[೧೩]

ಸೃಷ್ಟಿ ಕ್ರಿಯೆ ಮಾನವನು ಅತ್ಯಂತ ಬಲವಾಗಿ ನಂಬಿಕೊಂಡಿರುವ ದೇವರು, ಆಕಾಶ, ಭೂಮಿ, ಸೂರ್ಯ, ಚಂದ್ರ, ಮಳೆ, ಗಾಳಿ, ಮನುಷ್ಯನ ಉಗಮ, ಜೀವಿಗೂ ಜಗತ್ತಿನ ಮತ್ತು

ಸೃಷ್ಟಿಗೂ ಇರುವ ಸಂಬಂಧ, ಋತುಮಾನಗಳು, ಹುಟ್ಟು–ಸಾವು, ಹುಟ್ಟಿನ ಮುಂಚೆ ಮತ್ತು ಸಾವಿನ ಅನಂತರದ ಸ್ಥಿತಿ, ಮನುಷ್ಯ ಈ ಲೋಕದಲ್ಲಿ ಪಡುವ ರೋಗ–ರುಜಿನಗಳಂತಹ ಯಾತನೆಗಳ ಕಾರಣ ಇತ್ಯಾದಿಗಳ ನಿಸರ್ಗದ ರಹಸ್ಯವನ್ನು ಅರಿತುಕೊಳ್ಳಲು ಮಾಡಿದ ಪ್ರಯತ್ನಗಳೆಲ್ಲ ಪುರಾಣಗಳಾಗಿ ರೂಪಗೊಂಡವು. ಪುರಾಣವು ಮತೀಯ ಗುಣವನ್ನು ಹೊಂದಿದ್ದು ಮನುಷ್ಯನ ಮೂಲ ಸತ್ಯಕ್ಕೆ ಹೆಚ್ಚು ಹತ್ತಿರವಾಗಿದೆ. ಅದು ಅವರ ನಂಬಿಕೆ, ಶ್ರದ್ಧೆ, ನಡವಳಿಕೆ, ಮೂಲ ವ್ಯವಸ್ಥೆಗಳನ್ನು, ಆದರ್ಶಗಳನ್ನು ರೂಪಿಸುವ ಗುಣವನ್ನು ಹೊಂದಿದೆ. ಅದರಿಂದ ಅದು ಹೆಚ್ಚು ಗಂಭೀರವಾಗಿ, ಹೆಚ್ಚು ಪವಿತ್ರವಾಗಿ, ಹೆಚ್ಚು ವಾಸ್ತವವಾಗಿ ಕಾಣುತ್ತದೆ.[೧೪]

ಇಂದಿನ ವೈಜ್ಞಾನಿಕ ಸಂಶೋಧನೆಗಳನ್ನು ಮಾನವನು ಇನ್ನೂ ಕಂಡುಕೊಳ್ಳದ ಮುಂಚಿನ, ಆತನ ಅನಂತ ಬಗೆಯ ಊಹಾತ್ಮಕ ಕಲ್ಪನೆಗಳೇ ಪುರಾಣಗಳಾಗಿ ಸೃಷ್ಟಿಕೊಂಡವು. ಅದಕ್ಕಾಗಿ ಪುರಾಣವು ಕೇವಲ ಸೃಷ್ಟಿ ಕ್ರಿಯೆಯನ್ನು ಅಥವಾ ದೇವರ ಲೀಲೆಗಳನ್ನಷ್ಟೆ ಹೇಳುವುದಿಲ್ಲ. ಬದಲಾಗಿ ಅದು ಮಾನವನ ಬೆಳವಣಿಗೆಯ ಒಂದು ಹಂತವನ್ನು ಹೇಳುತ್ತದೆ ಎಂಬುದನ್ನು ಗಮನಿಸಬೇಕು.

"ಮಾನವ ವಿಕಾಸದ ಚರಿತ್ರೆಯೇ ಪುರಾಣ" ಎನ್ನುವ 'ಅಂಡ್ರೋ ಲಾಂಗ್' ಅವರ ಮಾತನ್ನು ನಾವು ಒಪ್ಪಬೇಕಾಗುತ್ತದೆ.[೧೫]

ಸ್ಥಳದ ಹುಟ್ಟು ಮಹಿಮೆಯನ್ನು ವಿವರಿಸುವ ಕಥೆಗಳನ್ನು ಸ್ಥಳ ಪುರಾಣಗಳೆಂದು ಕರೆಯುತ್ತಾರೆ. ಸ್ಥಳ ಪುರಾಣಗಳಲ್ಲಿ ನಿಸರ್ಗದ ಸೃಷ್ಟಿ ಸಂಬಂಧವಾದ ಕಥೆಗಳು ಇರುವಂತೆಯೇ ಮನುಕುಲದ ಸಂಪ್ರದಾಯ, ವೃತ್ತಿ, ಪದ್ಧತಿ, ವೈಚಿತ್ಯಗಳನ್ನು ವಿವರಿಸುವ ಕಥೆಗಳು, ಸ್ಥಳ ವೈಶಿಷ್ಟ್ಯಗಳಿಗೆ ಸಂಬಂಧಿಸಿದ ಕಥನಗಳು ಇರುತ್ತವೆ. ಸ್ಥಳ ಪುರಾಣಗಳು ಚರಿತ್ರೆಯ ಪ್ರಮುಖ ಆಕರಗಳಾಗಿದ್ದು, ಆಯಾ ಸ್ಥಳದ ವೈಶಿಷ್ಟ್ಯಗಳನಷ್ಟೆ ಒಳಗೊಂಡಿರುತ್ತವೆ. ಇಂದು ದೇವಾಲಯಗಳಿರುವ ಹೆಚ್ಚಿನ ಕ್ಷೇತ್ರಗಳಿಗೂ ಒಂದಿಲ್ಲದಿದ್ದರೊಂದು ಪುರಾಣ ಇದ್ದೇ ಇರುತ್ತದೆ. ಇಂತಹ ಪುರಾಣಗಳು ಆಯಾ ಕ್ಷೇತ್ರಗಳ ದೈವ, ದೇವರುಗಳ ಮಹತ್ವವನ್ನು ವಿವರಿಸುತ್ತದೆ. ಇವೆಲ್ಲಾ ಸಾಧ್ಯವೇ ಅಥವಾ ಇಲ್ಲವೇ ಎಂಬುದನ್ನು ಸಾಬೀತುಪಡಿಸಲು ಕಷ್ಟವೆನಿಸುವಷ್ಟರ ಮಟ್ಟಿಗೆ ಜನರಿಗೆ ಅವುಗಳ ಮೇಲೆ ನಂಬಿಕೆ ಬೇರೂರಿಬಿಟ್ಟಿದೆ. ವೈಜ್ಞಾನಿಕವಾಗಿ ಇಂಥ ಘಟನೆಗಳನ್ನು ಪುರಾಣಗಳೊಂದಿಗೆ ಸಾಧ್ಯವೆಂದು ಸಾಬೀತುಪಡಿಸುವುದು ಕಷ್ಟಸಾಧ್ಯ. ಒಂದು ವೇಳೆ ಇಲ್ಲಿ ಬರುವ ಅಸಾಧ್ಯವೆನಿಸುವ ಘಟನೆಗಳನ್ನು ಎಂತಹ ಪುರಾಣಗಳಿಂದ ಕಳಚಿಬಿಟ್ಟರೆ ಬಾಕಿ ವಿಷಯಗಳನ್ನು ಸಾಧ್ಯವೆಂದು ಸ್ವೀಕರಿಸಬಹುದೇನೋ, ಕೆಲವೊಂದು ಸಂದರ್ಭಗಳಲ್ಲಿ ಇವುಗಳ ಸಾಧ್ಯತೆಯ ಬಗ್ಗೆ ಸಂಶಯ ಏರ್ಪಡುವುದು ಸಹಜ. ಆದರೂ ಸ್ಥಳ ಪುರಾಣಗಳು ಎಷ್ಟೋ ಸಂದರ್ಭಗಳಲ್ಲಿ ಈ ನಾಡಿನ ಪೂರ್ವ ಸಂಸ್ಕೃತಿ, ನಡವಳಿಕೆ, ಆಚಾರ ವಿಚಾರಗಳ ಬಗೆಗೆ ಬೆಳಕು ಚೆಲ್ಲುತ್ತದೆ ಎಂಬ ಅಂಶವನ್ನು ನಾವು ಅಲ್ಲಗಳೆಯುವಂತಿಲ್ಲ.[೧೬]

ಒಟ್ಟಾರೆಯಾಗಿ ಹೇಳುವುದಾದರೆ ಪುರಾಣದ ಅಂಶಗಳು ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ತುಂಬಾ ಅನುಕೂಲಕರವಾಗಿದ್ದು, ಗತಿಸಿದ ಘಟನೆಗಳಲ್ಲಿರುವ ನೈಜತೆಯನ್ನು ತರ್ಕಿಸುವ ಮೂಲಕ ಚಾರಿತ್ರಿಕ ಅಂಶಗಳನ್ನು ಕಲೆಹಾಕಬಹುದಾಗಿದೆ.

ಪ್ರಸ್ತುತ ಈ ಅಧ್ಯಾಯದಲ್ಲಿ ಚಳ್ಳಕೆರೆ ತಾಲೂಕಿನ ಕಸಬಾ ಹೋಬಳಿಗೆ ಸಂಬಂಧಿಸಿದಂತೆ ಕೆಲವು ಪುರಾಣದ ಅಂಶಗಳನ್ನು ಕಲೆಹಾಕಲಾಗಿದ್ದು, ಪುರಾಣದ ಅಂಶಗಳನ್ನು ಚರ್ಚಿಸುವ ಮೂಲಕ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

## ದೊಡ್ಡೇರಿಯ ಸ್ಥಳ ಪುರಾಣ

ದೊಡ್ಡೇರಿ ಎಂಬ ಈ ಸ್ಥಳವು ಅಂದರೆ ರಾಮಾಯಣ ಮತ್ತು ಮಹಾಭಾರತ ಕಾಲದಿಂದಲೂ ಬಹಳ ಪ್ರಾಮುಖ್ಯತೆಯನ್ನು ಗಳಿಸಿದೆ. ಇವೆರಡು ಮಹಾಕಾವ್ಯಗಳ ಕಾಲವನ್ನು ನಾವು ಅವಲೋಕನ ಮಾಡಿದಲ್ಲಿ ಕೆಲವು ಅಂಶಗಳು ನಮಗೆ ಸ್ಪಷ್ಟವಾಗಿ ಗೋಚರವಾಗುತ್ತವೆ. ಹಂಪಿ ದೊಡ್ಡೇರಿಯಿಂದ ಸುಮಾರು ೧೮೦ ಕಿ.ಮೀ. ದೂರದಲ್ಲಿದೆ. ಇದರ ಬಗ್ಗೆ ಇತಿಹಾಸವನ್ನು ಕೆದಕಿದಾಗ ಸಾಕಷ್ಟು ಅಂಶಗಳು ಸಿಗುತ್ತವೆ. ಈ ಗ್ರಾಮಕ್ಕೂ ಹಂಪೆಗೂ ಎಲ್ಲಿಲ್ಲದ ನಂಟು. ಇತಿಹಾಸವನ್ನು ಇನ್ನೂ ಹೆಚ್ಚಾಗಿ ಕೆದಕಿದಲ್ಲಿ ಇದರ ನಂಟು ಬಹಳ ಹತ್ತಿರವಾಗುತ್ತಾ ಹೋಗುತ್ತದೆ.

ಇನ್ನು ರಾಮಾಯಣ ನಡೆದ ಕಾಲದ ಬಗ್ಗೆ ಇತಿಹಾಸದ ಪುಟಗಳಲ್ಲಿ ಉಲ್ಲೇಖವಾಗಿರುವುದು ಗೋಚರವಾಗುತ್ತದೆ. ಇದರ ಬಗ್ಗೆ ಅಧ್ಯಯನ ಮಾಡಿದಾಗ ರಾವಣನು ಸೀತಾದೇವಿಯನ್ನು ಅಪಹರಿಸಿಕೊಂಡು ಈ ಮಾರ್ಗವಾಗಿ ಬಂದಿರುತ್ತಾನೆ ಮತ್ತು ರಾವಣಾಸುರನು ಸೀತಾದೇವಿಯನ್ನು ಅಪಹರಿಸಿದ ಸಂದರ್ಭದಲ್ಲಿ ಜಟಾಯು ಪಕ್ಷಿಯೊಂದಿಗೆ ರಾವಣ ಹೋರಾಟ ಮಾಡಿ ಮೃತ ಹೊಂದಿದ ಸ್ಥಳವೇ ಜಟಂಗಿ ರಾಮೇಶ್ವರವೆಂದು ಗುರುತಿಸುತ್ತಾರೆ ಇತಿಹಾಸಕಾರರು.

ಜಟಂಗಿ ರಾಮೇಶ್ವರ ದೊಡ್ಡೇರಿಯಿಂದ ೭೫ ಕಿ.ಮೀ. ದೂರದಲ್ಲಿದೆ ಮತ್ತು ಈ ಸ್ಥಳದ ಸಮೀಪ ರಾಮಪುರವೆಂದು ಹೆಸರಿರುವ ಸ್ಥಳವಿದೆ. ಇತಿಹಾಸ ನಡೆದ ಕುರುಹಿಗಾಗಿ ರಾಮನ ಹೆಸರಿರುವ ಈ ಊರಿಗೆ ಅದೇ ಹೆಸರಿನ 'ರಾಂಪುರ'ವಾಗಿದೆ. (ಹುಳ್ಳೇಗಡ್ಡೆ ರಾಂಪುರ) ಬೆಟ್ಟಗಳ ಮೇಲಿನ ಬಂಡೆಗಳಲ್ಲಿ ಅಶೋಕನು ಶಿಲಾಶಾಸನವನ್ನು ಬರೆಸಿರುತ್ತಾನೆ. ಅಶೋಕನ ಕಾಲಕ್ಕಿಂತ ಮೊದಲೇ ಇಲ್ಲಿ ಜನಗಳು ವಾಸಿಸುತ್ತಿದ್ದರಂತೆ. ರಾವಣ ಸೀತೆಯನ್ನು ಕರೆದೊಯ್ಯುತ್ತಿದ್ದಾಗ ಜಟಾಯು ಪಕ್ಷಿ ಅವನನ್ನು ತಡೆದು ಆತನ ವಿರುದ್ಧ ಹೋರಾಟ ಮಾಡಿ ಮೃತ ಪಟ್ಟಿತು ಎಂದು ಪುರಾಣಗಳು ಹೇಳುತ್ತದೆ.[೨] ಜಟಾಯುವಿನ ಹೆಸರಿನಲ್ಲಿ ರಾಮನೇ ಶಿವಲಿಂಗವನ್ನು ಪ್ರತಿಷ್ಠಾಪಿಸಿದಂತೆಯೂ ಮತ್ತು ಆ ದೇವಾಲಯ ಇಟ್ಟಿಗೆಯಿಂದ ನಿರ್ಮಾಣವಾಗಿತ್ತು ಎಂದು, ಇದನ್ನು ಸಂಪೂರ್ಣವಾಗಿ ಕಿತ್ತು ರಾಮೇಶ್ವರನಿಗಾಗಿ ಕಲ್ಲಿನ ದೇವಾಲಯವೊಂದನ್ನು ಮತ್ತು ಹಲವು ದೇವಾಲಯಗಳನ್ನು ಲಿಂಗಶಿವಜಯನು ಕಟ್ಟಿಸಿದನೆಂದು ಅದೇ ಶಾಸನ ತಿಳಿಸುತ್ತದೆ.

ಜಟಾಯು ರಾವಣನೊಂದಿಗೆ ಹೋರಾಡುತ್ತಿದ್ದಾಗ ಸೀತೆಯು ನಿಂತಿದ್ದ ಸ್ಥಳವನ್ನು ಮತ್ತು ಕೊಳದ ಬಳಿಯಿರುವ ಪಾದಗಳನ್ನು ರಾವಣನು ಜಟಾಯುವನ್ನು ಕೆಡವಿದ ಸ್ಥಳವನ್ನು ಜಟಾಯುವಿನ ದೇಹಕ್ಕೆ ಅಗ್ನಿ ಸ್ಪರ್ಷ ಮಾಡಿದ ಸ್ಥಳ ಎಂದು ಅಲ್ಲಿನ ಜನ ಇಂದಿಗೂ ತೋರಿಸುತ್ತಾರೆ. ನೊಳಂಬರು ಮತ್ತು ಚಾಲುಕ್ಯರ ಕಾಲದಲ್ಲಿ ಇಲ್ಲಿ ಸಣ್ಣಪುಟ್ಟ ದೇವಾಲಯಗಳು ನಿರ್ಮಿತವಾಗಿದ್ದವು.

ಶ್ರೀರಾಮನು ದೊಡ್ಡೇರಿ ಮಾರ್ಗವಾಗಿ ತನ್ನ ವಾನರ ಸೇನೆಯೊಂದಿಗೆ ಲಂಕಾಗೆ ಸಾಗಿಸಿರಬಹುದು ಎಂದು ಕೆಲವು ಮೂಲಗಳಿಂದ ತಿಳಿದುಬಂದಿದೆ. ದೊಡ್ಡೇರಿಯಿಂದ ಲಂಕಾ ಪಟ್ಟಣವು ಸುಮಾರು ೩೫೦ ಕಿ.ಮೀ. ದೂರದಲ್ಲಿದೆ.[೭೮]

**ಮಹಾಭಾರತದಲ್ಲಿ ದೊಡ್ಡೇರಿಯ ಪುರಾಣ**

ಮಹಾಭಾರತದ ಕಾಲದಲ್ಲಿ ಹಿಡಿಂಬಾಪುರ (ಈಗಿನ ಚಿತ್ರದುರ್ಗ)ದಿಂದ ೩೫ ಕಿ.ಮೀ. ದೂರದಲ್ಲಿದೆ. ಪಾಂಡವರು ತಮ್ಮ ವನವಾಸವನ್ನು ಈ ಪ್ರದೇಶದಲ್ಲಿ ಮಾಡಿರಬಹುದು ಎಂದು ಇತಿಹಾಸಕಾರರು ವಿಶ್ಲೇಷಿಸುತ್ತಾರೆ. ಪಾಂಡವರಲ್ಲಿ ಒಬ್ಬರಾದ ಭೀಮನು ಹಿಡಂಬಿಯನ್ನು ಮದುವೆಯಾದನೆಂದು ಪುರಾಣಗಳಲ್ಲಿ ಉಲ್ಲೇಖವಾಗಿದೆ. ಹಾಗಾಗಿ ಸ್ಥಳದ ಕುರುಹುಗಾಗಿ ಹಿಡಂಬಪುರವೆಂದು ಈ ಸ್ಥಳಕ್ಕೆ ಇದರ ಹೆಸರ ಹಿಂದೆ ಹಿಡಿಂಬಾಪುರವೇ ಈಗಿನ ಚಿತ್ರದುರ್ಗವಾಗಿದೆ.

ಪುರಾಣಗಳಲ್ಲಿ ವಿಶ್ಲೇಷಿಸಿದಾಗ ಈ ಪ್ರದೇಶವು ಋಷಿಮುನಿಗಳು ಮತ್ತು ಸಿದ್ಧಪುರುಷರು ನೆಲೆಸಿದ ಸ್ಥಳವೆಂದು ಹೇಳಬಹುದು. ಇವರಲ್ಲಿ ಮುಖ್ಯವಾದವರೆಂದರೆ ಶ್ರೀ ಚನ್ಮಲಾದ್ರಿ ಎಂಬ ಸಿದ್ದಪುರುಷರು ಇವರು ಜ್ಞಾನಿಗಳು ಮತ್ತು ಯೋಗಿಗಳಾಗಿರುತ್ತಾರೆ. ಈ ಸಿದ್ದ ಪುರುಷರು ಹಿಡಿಂಬಾಪುರದಿಂದ ೩೫ ಕಿ.ಮೀ. ದೂರದಿಂದ ಇಲ್ಲಿಗೆ ಸಂಚರಿಸಿದವರಾಗಿರುತ್ತಾರೆ. ಇನ್ನು ಕ್ರಿ.ಪೂ. ೯ನೆಯ ಶತಮಾನದಲ್ಲಿ ಮೌರ್ಯ ಚಕ್ರವರ್ತಿಯಾದ ಚಂದ್ರಗುಪ್ತ ಮೌರ್ಯ ತನ್ನ ೧೨,೦೦೦ ಜೈನ ಸನ್ಯಾಸಿಗಳೊಂದಿಗೆ ಪಾಟಲಿಪುತ್ರದಿಂದ ಸಾಂಚಿ ಮಾರ್ಗವಾಗಿ ವಾರಂಗಲ್ ಮೂಲಕ ಬ್ರಹ್ಮಗಿರಿ ಮಾರ್ಗವಾಗಿ ದೊಡ್ಡೇರಿ ಮಾರ್ಗವಾಗಿ ಬೆಳಗೆರೆಯಲ್ಲಿ ಹೆಚ್ಚಾಗಿ ಜೈನರಿರುವ ಸ್ಥಳಗಳಾದ ಧರ್ಮಪುರ, ಬೇಲೂರು, ಹಳೇಬೀಡು, ಶ್ರವಣಬೆಳಗೊಳಕ್ಕೆ ತೆರಳಿರಬಹುದು ಎಂದು ಕೆಲವು ಆಧಾರಗಳು ತಿಳಿಸುತ್ತದೆ. (ಆಧಾರ: ಬ್ರಹ್ಮಗಿರಿ ಮೌರ್ಯರ ಒಂದು ಸಾಂಸ್ಕೃತಿಕ ಕೇಂದ್ರ, ಬ್ರಹ್ಮ, ಧರ್ಮ, ಪದಗಳು ಜೈನ ಧರ್ಮಕ್ಕೆ ಸಂಬಂಧಪಟ್ಟವು ಎಂದು ತಿಳಿಸುತ್ತದೆ) ಈತನು ಜೈನ ಧರ್ಮಗಳ ಬಗ್ಗೆ ಪ್ರಚಾರ ಪಡಿಸುತ್ತಾರೆ. ಹಾಗಾಗಿ ಅದನ್ನು ಹೆಚ್ಚಾಗಿ ವಿಸ್ತರಿಸುತ್ತಾ ಹೋಗಿರುತ್ತಾರೆ.[೭೯]

**ಗೋಕರ್ಣೇಶ್ವರ ದೇವಸ್ಥಾನದ (ಕನ್ನೇಶ್ವರಸ್ವಾಮಿ) ಪುರಾಣ**

ದೊಡ್ಡೇರಿ ಗ್ರಾಮದಲ್ಲಿ ಪ್ರಸಿದ್ಧವಾದ ಪುರಾತನ ಕಾಲದ ಶಿವ ಮಂದಿರವಿದೆ. ಇದನ್ನು ಶ್ರೀ ರಾಮಲಕ್ಷ್ಮಣರು ಸ್ಥಾಪಿಸಿರುತ್ತಾರೆ ಎಂಬ ಪ್ರತೀತಿ ಇದೆ. ಈ ದೇವಸ್ಥಾನವು ದೊಡ್ಡೇರಿ ಗ್ರಾಮದ ಪಶ್ಚಿಮ ಮತ್ತು ದಕ್ಷಿಣ ದಿಕ್ಕಿನಲ್ಲಿ ಮಧ್ಯದಲ್ಲಿ ಬರುತ್ತದೆ. ಈ ವಾಸ್ತು ಎಷ್ಟು

ವೈಶಿಷ್ಟ್ಯವಾಗಿದೆ ಎಂದರೆ ನಾವು ವೈಜ್ಞಾನಿಕವಾಗಿ ನೋಡಿದರೆ ಜೀವ ತರಂಗಗಳಿಂದ ದಟ್ಟವಾಗಿ ಕೂಡಿರುವ ಈ ಶಿವಲಿಂಗ ವಿಶಿಷ್ಟತೆಯಿಂದ ಕೂಡಿದೆ. ಭಾರತ ದೇಶದಲ್ಲಿ ಈ ತರಹದ ವಾಸ್ತುಗಳಿಂದ ಕೂಡಿರುವ ಶಿವನ ಮಂದಿರವು ಬಹಳ ಅಪರೂಪಗಳಲ್ಲಿ ಒಂದಾದ ದೇವಸ್ಥಾನವಾಗಿದೆ.

ಇನ್ನು ಈ ಶಿವನ ಮಂದಿರಕ್ಕೆ ಈ ಗೋಕರ್ಣೇಶ್ವರ ಅಂತ ಹೆಸರು ಬರಲು ಕಾರಣವೇನೆಂದರೆ, ರಾಮಾಯಣ ನಡೆದ ಕಾಲದಲ್ಲಿ ಈ ಸ್ಥಳವೆಲ್ಲವೂ ಕಾಡುಗಳಿಂದ ಕೂಡಿರುವ ಸ್ಥಳವಾಗಿತ್ತು ಮತ್ತು ದಂಡಕಾರಣ್ಯದಿಂದ ಕೂಡಿದ ಈ ಪ್ರದೇಶವು ಬಹಳ ಪವಿತ್ರವಾದ ಸ್ಥಳವೆಂದು ರಾಮ ಲಕ್ಷ್ಮಣರು ತಮ್ಮ ವನವಾಸ ಕಾಲದಲ್ಲಿ ಇಲ್ಲೆಲ್ಲಾ ತಿರುಗಾಟ ನಡೆಸಿ ಇವರು ಈ ವಿಶಿಷ್ಟವಾದ ಶಿವಲಿಂಗ ಸ್ಥಾಪಿಸಿರುತ್ತಾರೆ. ಈ ಸ್ಥಳದಲ್ಲಿ ವಾಲ್ಮೀಕಿ ಜನಾಂಗದವರು ಹೆಚ್ಚಾಗಿ ಜೀವಿಸುತ್ತಾ ಬಂದಿರುತ್ತಾರೆ. ಮತ್ತು ಇವರು ಗೋವುಗಳನ್ನು ಸಹ ಪೂಜಿಸುತ್ತಿದ್ದರು.

ಶಿವನ ವಾಹನವಾದ ಈ ನಂದಿಯನ್ನು ದೇವರೆಂದು ನಂಬಿ ಈಶ್ವರನನ್ನು ಭಕ್ತಿಯಿಂದ ಪೂಜಿಸುತ್ತಾ ಬಂದಿರುತ್ತಾರೆ. ಗೋವುಗಳೊಂದಿಗೆ ಜೀವಿಸುವ ಈ ಕನ್ನೆಪ್ಪ ಜನಾಂಗದವರಿಗೆ 'ಗೋವುಗಳ ಕೊಪ್ಪನೆಂದು ಕರೆಯುತ್ತಾ ಕೊನೆಗೆ ಈಶ್ವರನನ್ನು ಸೇರಿ ಗೋಕನ್ನೇಶ್ವರ' ಅಂತ ಜೊತೆಗೆ ಜನರ ಬಾಯಲ್ಲಿ ಬರುತ್ತಾ ಬರುತ್ತಾ ಗೋಕರ್ಣೇಶ್ವರ ಹೆಸರು ಸ್ಥಿರವಾಗಿ ಬಂದಿರಬಹುದು ಎಂಬುದು ಪುರಾಣದಿಂದ ತಿಳಿಯಬಹುದಾಗಿದೆ.

## ಚಂದ್ರಗಿರಿಯಮ್ಮ ಹೊಂಡದ ಪುರಾಣ

ಚಳ್ಳಕೆರೆಯಿಂದ ೫ ಕಿ.ಮೀ. ದೂರದಲ್ಲಿರುವ ಸೋಮಗುದ್ದು ಎಂಬ ಗ್ರಾಮವಿದೆ. ಈ ಗ್ರಾಮದ ಪೂರ್ವ ದಿಕ್ಕಿಗೆ ಕಂಡುಬರುವ ಚಂದ್ರಗಿರಿಯಮ್ಮ ಎಂಬ ಹೊಂಡವಿದೆ. ಸೋಮಗುದ್ದಿನ ಚಂದ್ರಗಿರಿಯಮ್ಮನನ್ನು ಬೇರೆ ಊರಿಗೆ ಮದುವೆ ಮಾಡಿಕೊಟ್ಟಿದ್ದರು, ಚಂದ್ರಗಿರಿಯಮ್ಮ ದಾಂಪತ್ಯ ಜೀವನದಲ್ಲಿ ಸಾಕಷ್ಟು ಕಷ್ಟ ಹಾಗೂ ಸಮಸ್ಯೆಗಳು ಕಂಡುಬಂದು ತದನಂತರ ಚಂದ್ರಗಿರಿಯಮ್ಮನ ನಡೆತೆಯ ಬಗ್ಗೆ ಗಂಡನಿಗೆ ಅನುಮಾನ ಬಂದಿದ್ದರಿಂದ ಚಂದ್ರಗಿರಿಯಮ್ಮ ಸೋಮಗುದ್ದಿನ ಹೊಂಡಕ್ಕೆ ದುಮುಕಿ ತನ್ನ ಪ್ರಾಣ ತೆತ್ತಳು. ತದನಂತರ ಈ ಹೊಂಡದ ನೀರಿನ ಮೇಲೆ ನಿಂಬೆಹಣ್ಣಿನ ರೂಪದಲ್ಲಿ ತೇಲಿ ಬಂದಿತು. ಈ ಕಾರಣದಿಂದ ಈ ಹೊಂಡವನ್ನು ಮುಚ್ಚಿದರು. ಕಾರಣ ಇದೇ ತರಹದ ಯಾವ ಹೆಣ್ಣು ಈ ಸಾವಿನಂತಹ ದುರ್ಗತಿ ಬರಬಾರದೆಂದು. ನಿಂಬೆಹಣ್ಣಿನ ರೂಪದಲ್ಲಿ ತೇಲಿಬಂದ ಚಂದ್ರಗಿರಿಯಮ್ಮನನ್ನು ಈ ಹೊಂಡ ಮುಚ್ಚಿ ತದನಂತರ ಇದೇ ಹೊಂಡದ ಮೇಲೆ ಚಂದ್ರಗಿರಿಯಮ್ಮನನ್ನು ಸಮಾಧಿಮಾಡಿ ತದನಂತರ ಚಂದ್ರಗಿರಿಯಮ್ಮ ಎಂದು ನಾಮಕರಣ ಮಾಡಿ ಪ್ರತಿನಿತ್ಯ ಪೂಜೆ ಮಾಡುತ್ತಾರೆ.[೨೦]

## ಬಾಲಸಿದ್ದೇಶ್ವರ ದೇವಸ್ಥಾನದ ಪುರಾಣ

ಬಾಲಸಿದ್ದೇಶ್ವರ ದೇವಸ್ಥಾನವು ಪುರಾತನ ಹಳೆಯ ಕಾಲದ ದೇವಸ್ಥಾನವಾಗಿದೆ. ಈ

ಮಂದಿರವು ದೊಡ್ಡೇರಿ ಊರು ಒಳಗಿನಿಂದ ಗೊಲ್ಲರಹಟ್ಟಿಗೆ ಹೋಗುವ ದಾರಿಯಲ್ಲಿ ಬರುತ್ತದೆ. ಈ ಮಂದಿರಕ್ಕೆ ಸುಮಾರು ಜಂಗಮ ಮನೆತನದವರು ನಡೆದುಕೊಳ್ಳುತ್ತಾರೆ. ದೊಡ್ಡೇರಿಯ ಶ್ರೀ ಬಾಲಸಿದ್ದೇಶ್ವರ ಸ್ವಾಮಿಯ ಗದ್ದಿಗೆಯ ಇತಿಹಾಸ ಬಹಳ ವರ್ಷಗಳ ಹಿಂದಿನದು ಸುಮಾರು ಸಾವಿರಾರು ವರ್ಷಗಳಿಂದ ಇದೆ.

ಜಂಗಮರು ಪೂರ್ವಿಕರಲ್ಲಿ ಒಬ್ಬರಿಗೆ ಈಗಿರುವ ಮಠದ ಮಧ್ಯ ಭಾಗದಲ್ಲಿ ಒಂದು ಹುತ್ತದಲ್ಲಿ ಒಬ್ಬ ಬಾಲಕನು ಕಾಣಿಸಿಕೊಂಡು ನಾನು ಬಾಲಸಿದ್ದೇಶ್ವರ, ನನ್ನ ಗದ್ದಿಗೆಯನ್ನು ನಿರ್ಮಾಣ ಮಾಡಬೇಕೆಂದು ತಿಳಿಸಿ ಮಾಯವಾದನಂತೆ. ನಂತರ ಪೂರ್ವಿಕರು ಈ ಸ್ಥಳಕ್ಕೆ ಶ್ರೀ ಬಾಲಸಿದ್ದೇಶ್ವರ ಅಂತ ಕರೆದಿರುತ್ತಾರೆ. ಪೂರ್ವಿಕರು ತಿಳಿಸಿದಂತೆ ಇಲ್ಲಿಗೆ ಒಂದು ಹಸು ಬಂದು ಸ್ವತಃ ತನ್ನ ಕೆಚ್ಚಲಿನಿಂದ ಹುತ್ತ ಇರುವ ಜಾಗಕ್ಕೆ ಹಾಲನ್ನು ಸುರಿಸಿ ಹೋಗುತ್ತಿತ್ತು. ಅಂತ ಪೂರ್ವಿಕರು ಇದನ್ನು ಪ್ರತ್ಯಕ್ಷವಾಗಿ ನೋಡಿ ತಿಳಿಸಿರುತ್ತಾರೆ. ಪೂರ್ವಿಕರು ತಮ್ಮ ಅಣ್ಣತಮ್ಮಂದಿರನ್ನು ಕರೆಯಿಸಿ ಇದು ನಮ್ಮ ಮನೆದೇವರು. ಈ ಸ್ಥಳದಲ್ಲಿ ಮಠವನ್ನು ನಿರ್ಮಾಣ ಮಾಡಬೇಕೆಂದು ತಿಳಿಸಿದರು. ಅದರಂತೆ ಅಲ್ಲಿ ಮಠವನ್ನು ನಿರ್ಮಾಣ ಮಾಡಿರುತ್ತಾರೆ. ಮತ್ತು ಮಠದ ಉಸ್ತುವಾರಿ ನೋಡಿಕೊಳ್ಳಲು ಒಬ್ಬ ಬ್ರಹ್ಮಚಾರಿಯನ್ನು ನೇಮಿಸಬೇಕೆಂದು ತಿಳಿಸಿದರು. ಅಣ್ಣತಮ್ಮಂದಿರು ಎಲ್ಲರೂ ಸೇರಿ ಹಣವನ್ನು ಸೇರಿಸಿ ಈ ಮಂದಿರವನ್ನು ನಿರ್ಮಿಸಿರುತ್ತಾರೆ. ಇಲ್ಲಿಯ ಫಲಹಾರ ಬೆಲ್ಲ ತಂಬಿಟ್ಟು ಉಂಡೆ ನೈವೇದ್ಯವನ್ನು ಮಾಡುತ್ತಾರೆ. ಇದಕ್ಕೆ ಸಾಕಷ್ಟು ಪುರಾಣಗಳಲ್ಲಿ ಉಲ್ಲೇಖವಿದೆ.

**೩.೫. ಐತಿಹ್ಯ ಪದ ನಿಷ್ಪತ್ತಿ**

"ಐತಿಹ್ಯ ಪದ ನಿಷ್ಪತ್ತಿ–ಐತಿಹ್ಯ ಮತ್ತು ಇತಿಹಾಸ ಇವೆರಡು ಒಂದೇ ಮೂಲದ ಸಂಸ್ಕೃತ ಪದಗಳು. 'ಇತ' 'ಇತಿಹ' ಎನ್ನುವ ಸಂಸ್ಕೃತ ರೂಪದಿಂದ ಐತಿಹ್ಯವು ನಿಷ್ಪನ್ನವಾಗಿದ್ದು"[೨೧] ಈ ಶಬ್ದರೂಪಗಳಿಗೆ ಹೀಗೆ, ಹೀಗಿತ್ತು, ಹೀಗೆ ನಡೆದದ್ದು ಎಂಬ ಅರ್ಥಗಳಿವೆ. ಅದರಂತೆ ಇಂದು ನಾವು ಯಾವುದನ್ನು ಐತಿಹ್ಯ ಎಂದು ಗುರುತಿಸುತ್ತೇವೆಯೋ, ಅದು ಒಂದು ಕಾಲದಲ್ಲಿ ನಿಜವಾಗಿ ನಡೆದ ಘಟನೆಯೊಂದರ ನಿರೂಪಣೆಯೆಂಬ ವಿಶ್ವಾಸ ಅದರ ಪ್ರಸಾರದಲ್ಲಿರುತ್ತದೆ. ಹೀಗೆ ನೋಡಿದರೆ ಚರಿತ್ರೆಯ ಸಂವಾದಿ ಪದವಾದ ಇತಿಹಾಸವೂ 'ಇತಿ' ಇತಿಹ ರೂಪಗಳಿಂದಲೇ ನಿಷ್ಪನ್ನವಾಗಿದೆ. ಆದುದರಿಂದ ಇತಿಹಾಸ ಮತ್ತು ಐತಿಹ್ಯಕ್ಕೆ ಸಹ ಸಂಬಂಧ ವ್ಯತ್ಯಾಸಗಳೇನಾದರೂ ಇರಬಹುದು. ಈಗಾಗಲೇ ಶಬ್ದರೂಪದಲ್ಲಿಯೂ ಸಾಮ್ಯವಿದೆಯೆಂಬುದು ಸ್ಪಷ್ಟವಾಗಿದೆ. ಇವೆರಡು ಪದಗಳು ಧ್ವನಿಸುವ ಅರ್ಥವನ್ನು ಗಮನಿಸಿದರೆ, ವಸ್ತು ವಿಷಯಗಳ ಬಗೆಗೆ ನೋಡಿದರೆ ಇತಿಹಾಸ ಎನ್ನುವುದು ನಡೆದ ಘಟನೆಗಳ ಲಿಖಿತ ದಾಖಲಾತಿ ಎಂದು ತಿಳಿಯಬಹುದು. ಉದಾ. ಸಾಹಿತ್ಯ, ಶಾಸನ, ನಾಣ್ಯ, ಬಖೈರು, ಅವಶೇಷಗಳು, ವಿದೇಶಿಯರ ಬರಹಗಳು ಇತಿಹಾಸ ರಚನೆಗೆ ಆಕರ ಸಾಮಗ್ರಿಗಳಾಗುತ್ತವೆ. ಐತಿಹ್ಯವೆಂದರೆ ಮೌಖಿಕ ಸಂಪ್ರದಾಯದಲ್ಲಿ ಹಿಂದಿನಿಂದ ಉಳಿದುಕೊಂಡು ಬಂದಿರುವ ಹಾಗೂ

ವಾಸ್ತವವಾಗಿ ನಡೆದಿದೆ ಎಂದು ನಂಬಿರುವ ಘಟನೆಗಳ ಗದ್ಯ ನಿರೂಪಣೆಯನ್ನು ಐತಿಹ್ಯವೆನ್ನಬಹುದು. ಇಲ್ಲಿ ಒಮ್ಮೆ ಲಿಖಿತ ದಾಖಲೆಗಳಿಗೂ ಐತಿಹ್ಯದಲ್ಲಿ ಹೇಳಲಾಗುವ ವಿಚಾರಗಳಿಗೂ ಕೆಲವೊಮ್ಮೆ ಸಾಮ್ಯ ಸಂಬಂಧ ಕಂಡುಬರುವುದು. ಇನ್ನೂ ಕೆಲವು ಬಾರಿ ಇವೆರಡು ತೀರಾ ವ್ಯತ್ಯಾಸವೇ ಆಗಿ ಕಾಣಬಹುದು. ಆದರೆ ಕೆಲವು ಐತಿಹ್ಯಗಳಲ್ಲಿ ನೈಜ ಘಟನೆಯ ಸಣ್ಣ ಎಳೆಯೊಂದು ಮಾತ್ರವಿದ್ದು, ಅದರ ಸುತ್ತ ಕಲ್ಪಿತಾಂಶಗಳು ಕೂಡ ಸೇರಿರಬಹುದು.

ಒಂದು ಪ್ರದೇಶದ ಸಮಗ್ರ ಅಧ್ಯಯನ ಕೈಗೊಳ್ಳುವುದರ ಮೂಲಕ ಆ ಪ್ರದೇಶದ ಚರಿತ್ರೆಯನ್ನು ಕಟ್ಟಲು ಸಾಧ್ಯವಿದೆ. ಆದರೆ ಇಲ್ಲಿಯವರೆಗೆ ಇತಿಹಾಸ ರಚನೆಕಾರರು ಲಿಖಿತ ಪರಂಪರೆಯನ್ನೇ ಅವಲಂಬಿಸಿ ಚರಿತ್ರೆಯನ್ನು ಕಟ್ಟಿಕೊಟ್ಟಿದ್ದಾರೆ. ಇದರಿಂದಾಗಿ ಬಹುಸಂಖ್ಯಾತ ಜನಸಮುದಾಯಗಳ ಮನದಲ್ಲಿರುವ ರೂಪದ ಚರಿತ್ರೆಯ ಆಯಾಮಗಳನ್ನು ಕಡೆಗಣಿಸಿದ್ದಾರೆ. ಸಾಂಸ್ಕೃತಿಕ ಚರಿತ್ರೆಯ ರಚನೆಯಲ್ಲಿ ಇತ್ತೀಚಿಗೆ ಮೌಖಿಕ ಪರಂಪರೆಯನ್ನು ಆಧಾರವಾಗಿ ಬಳಸಿಕೊಳ್ಳಲಾಗುತ್ತಿದೆ. ಮೌಖಿಕ ಆಧಾರಗಳು ಜೀವಂತವಾಗಿ, ಜನಸಮುದಾಯದ ಬದುಕಿನ ಭಾವನೆಗಳಲ್ಲಿ ಬೆರೆತು ಹೋಗಿರುತ್ತವೆ.

ಈ ಹಿನ್ನೆಲೆಯಲ್ಲಿ ಸ್ಥಳೀಯವಾಗಿ ಮೌಖಿಕ ಪರಂಪರೆಯಲ್ಲಿರುವ ಐತಿಹ್ಯಗಳ ಅಧ್ಯಯನಕ್ಕೆ ತೊಡಗಿದಾಗ ಅಲ್ಲಿಂದ ಚರಿತ್ರೆಯ ಇನ್ನೊಂದು ಮುಖದ ಪರಿಚಯವಾಗುತ್ತದೆ. ಹೀಗೆ ಕಂಠಪಾಠದ ಪರಂಪರೆಯ ಕವಲುಗಳಾದ ಐತಿಹ್ಯಗಳನ್ನು ಬಳಸಿಕೊಳ್ಳುವುದರ ಮೂಲಕ ಇತಿಹಾಸವನ್ನು ಸತ್ಯದ ದಿಕ್ಕಿನೆಡೆಗೆ ಕೊಂಡೊಯ್ಯಲು ಸಾಧ್ಯವಾಗುತ್ತದೆ. ಐತಿಹ್ಯಗಳು ಮಾನವನ ಸಾಮಾಜಿಕ ಜೀವನಕ್ಕೆ ಹತ್ತಿರವಾದ ಹಾಗೂ ನಡೆಯಬಹುದಾದ ಘಟನೆಗಳನ್ನು ಆಧಾರಸಹಿತವಾಗಿ ಹಾಗೂ ವಾಸ್ತವಕ್ಕೆ ಹತ್ತಿರವಾದ ವಿಚಾರಗಳನ್ನು ಬಂಬಿಸುವ ಘಟನೆಗಳೆಂಬಂತೆ ಕಂಡುಬರುತ್ತವೆ.

ಈ ಐತಿಹ್ಯಗಳು ಚಾರಿತ್ರಿಕ ಘಟನೆಗಳೆಂಬಂತೆ ತೋರಿಬರುತ್ತಿವೆ. ಹಾಗೆಯೇ ಚಾರಿತ್ರಿಕ, ಪೌರಾಣಿಕ ಹಾಗೂ ಕಾಲ್ಪನಿಕ ಅಂಶಗಳಿಂದ ಕೂಡಿ ಆಕರ್ಷಿತವಾಗಿರುತ್ತದೆ. ಅವುಗಳಲ್ಲಿಯ ಚಾರಿತ್ರಿಕ ಹಾಗೂ ಕಲ್ಪಿತ ಅಂಶಗಳನ್ನು ಸೂಕ್ಷ್ಮವಾಗಿ ಬೇರ್ಪಡಿಸಿ ಚಾರಿತ್ರಿಕ ಸತ್ಯವನ್ನು ಮಾತ್ರ ಗುರುತಿಸಬೇಕಾಗುತ್ತದೆ. ಪುರಾತತ್ವ ಅಧ್ಯಯನಗಳ ಆಕರಗಳ ಜೊತೆಜೊತೆಗೆ ಈ ಮೌಖಿಕ ಆಕರಗಳ ಪ್ರಬೇಧಗಳಾದ ಐತಿಹ್ಯಗಳನ್ನು ಬಳಸಿಕೊಳ್ಳುವುದು ಮುಖ್ಯವಾಗಿದೆ. ಈ ಐತಿಹ್ಯಗಳು ವ್ಯಕ್ತಿಗಳ, ಸ್ಥಳಗಳ ಅಥವಾ ಘಟನೆಗಳ ವಾಸ್ತವ ಅಥವಾ ತೋರಿಕೆಯ ನಂಬಿಕೆಗಳನ್ನೊಳಗೊಂಡ ಕಥನಗಳಾಗಿವೆ.

'ಲೆಜೆಂಡ್'ಗಳೆಂದು ಕರೆಯಲ್ಪಡುವ ಐತಿಹ್ಯಗಳು ಪ್ರಪಂಚದ ವಿವಿಧ ರಾಷ್ಟ್ರಗಳಲ್ಲಿ ಅಸ್ತಿತ್ವದಲ್ಲಿವೆ. Legeng ಎಂಬ ಪದ ಮೂಲತಃ ಲ್ಯಾಟಿನ್ ಪದವಾಗಿದೆ. ಅಲ್ಲಿ ಇದಕ್ಕೆ Things to be read ಎಂಬ ಅರ್ಥವಿದೆ. ODHAMS DICTIONARY ಫ್ರೆಂಚ್ ಭಾಷೆಯಲ್ಲಿಯೂ ಇದೇ ಅರ್ಥ ಉಳಿದು ಬೆಳೆದುಕೊಂಡು ಬಂದಿದೆ. ಐತಿಹ್ಯಕ್ಕೆ ಜರ್ಮನ್ ಭಾಷೆಯಲ್ಲಿ 'ಸಾಗೆ' (Sagen)

ಎಂದು ಕರೆಯುವರು. ಐತಿಹ್ಯದ ಅರ್ಥವನ್ನು ತಿಳಿಯ ಹೊರಟರೆ ಇದು ಏಇತಿಹಿ, ಏಇತಿಹಡಿ ಎನ್ನುವ ಸಂಸ್ಕೃತ ರೂಪದಿಂದ ನಿಷ್ಪನ್ನವಾಗಿದೆ. ಈ ಶಬ್ದ ರೂಪಗಳಿಗೆ ಹೀಗೆ, ಹೀಗಿತ್ತು, ಹೀಗೆ ನಡೆದದ್ದು, ಹೀಗಿರಬೇಕು[೨೨] ಎಂಬ ಮುಂತಾದ ಅರ್ಥಗಳಿವೆ. ಇಂದು ನಾವು ಯಾವುದನ್ನು ಏವತಿಹ್ಯಹಿ ಎಂದು ಗುರುತಿಸುತ್ತೇವೆಯೋ ಅದು ಒಂದು ಕಾಲದಲ್ಲಿ ನಿಜವಾಗಿ ನಡೆದ ಘಟನೆಯೊಂದರ ನಿರೂಪಣೆ ಎಂಬ ವಿಶ್ವಾಸ ಅದರಲ್ಲಿರುತ್ತದೆ. ಐತಿಹ್ಯವೆಂದರೆ ಜನಪದರು ತಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಪೌರಾಣಿಕ ಅಥವಾ ಇತಿಹಾಸದ ಘಟನೆಗಳನ್ನು ತಮ್ಮದೇ ಶೈಲಿಯಲ್ಲಿ ನಿರೂಪಿಸುವುದಕ್ಕೆ ಗುರುತಿಸುವುದಕ್ಕೆ ಐತಿಹ್ಯ ಎನ್ನುವರು.[೨೩] ಪರಂಪರೆಯಿಂದ ಬಂದ ಕೆಲವು ಐತಿಹ್ಯಗಳು ವರ್ತಮಾನಕ್ಕೆ, ಭವಿಷತ್ತಿಗೆ ಮುಂದುವರೆಯುತ್ತವೆ. ಐತಿಹ್ಯಗಳು ಜನಪದರ ದೃಷ್ಟಿಯಿಂದ ಅಭಿವ್ಯಕ್ತಗೊಂಡಿರುತ್ತವೆಯಲ್ಲದೆ ಚಿಂತನೆಯ ಪ್ರಭಾವವಿರುತ್ತದೆ.

ಐತಿಹ್ಯವೆಂದರೆ ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡು ಬಂದಿರುವ ಹಿಂದೆ ವಾಸ್ತವವಾಗಿ ನಡೆದದ್ದೆ ಎಂಬುದಾಗಿ ಅದರ ಪ್ರಸಾರಕರಿಗೆ ವಿಶ್ವಾಸವಿರುವ ಘಟನೆಗಳ ಗದ್ಯ ರೂಪದ ನಿರೂಪಣೆ. ಒಂದು ದೃಷ್ಟಿಯಲ್ಲಿ ಇದು ಜನಪದ ಇತಿಹಾಸ. ಇಲ್ಲಿ ಲಿಖಿತಗಳೇನೂ ಇರುವುದಿಲ್ಲ. ಇತರ ಲಿಖಿತ ದಾಖಲೆಗಳಿಗೂ ಐತಿಹ್ಯದಲ್ಲಿ ಹೇಳಲಾಗುವ ವಿಚಾರಗಳಿಗೂ ಕೆಲವೊಮ್ಮೆ ಸಾಮ್ಯ ಸಂಬಂಧ ಕಂಡುಬರುವುದು. ಇನ್ನೂ ಕೆಲವು ಬಾರಿ ಇವೆರಡೂ ತೀರಾ ವ್ಯತ್ಯಾಸವೇ ಆಗಿದ್ದು ಕಾಣಬರುತ್ತದೆ. ಕೆಲವು ಐತಿಹ್ಯಗಳಲ್ಲಿ ನೈಜ ಘಟನೆಯ ಸಣ್ಣ ಎಳೆಯೊಂದು ಮಾತ್ರವಿದ್ದು, ಅದರ ಸುತ್ತ ಕಲ್ಪಿತಾಂಶಗಳು ಹಚ್ಚಿಕೊಂಡಿರುತ್ತವೆ. ಒಂದು ದೃಷ್ಟಿಯಿಂದ ನೋಡಿದರೆ ಇತಿಹಾಸ ಮತ್ತು ಸಾಹಿತ್ಯ ಇವೆರಡರ ಅಂಶಗಳು ಇದರಲ್ಲಿವೆ. ಹಿಂದೆ ನಡೆದ, ನಡೆದಿರಬಹುದಾದ, ಕೇಳಿದ ಘಟನೆಯೊಂದರ ಪುನರ್‌ಸೃಷ್ಟಿ ಇದಾಗಿದ್ದರೂ ಇಂದು ಐತಿಹ್ಯಕಕ್ಕೂ ಇತಿಹಾಸ ರಚನೆಗೆ ಒಂದು ಆಕರವಾಗಿ ಬಳಕೆಯಾಗುವ ಸ್ಥಾನ ದೊರೆತಿದೆ.[೨೪]

## ಸ್ಥಳ ಪುರಾಣ ಐತಿಹ್ಯಗಳು

ಒಂದು ಸ್ಥಳದ ಭೌಗೋಳಿಕ ವೈಶಿಷ್ಟ್ಯ ಅಸಾಮಾನ್ಯತೆಯನ್ನು ಗಮನಿಸಿಕೊಂಡು ಸ್ಥಳ ಐತಿಹ್ಯಗಳು ಹುಟ್ಟಿಕೊಂಡಿರುತ್ತವೆ. ಇವು ಸ್ಥಳ ಮಹಿಮೆ, ವ್ಯಕ್ತಿ ವಿಶೇಷಗಳು, ಸಂಪ್ರದಾಯಗಳು ಮತ್ತು ಘಟನೆಗಳನ್ನು ತಿಳಿಸುತ್ತವೆ. ಇವು ಸಂಕ್ಷಿಪ್ತ ರೂಪವಾಗಿದ್ದು ಗದ್ಯಾತ್ಮಕವಾಗಿರುವ ಈ ಸ್ಥಳ ಐತಿಹ್ಯಗಳು ಒಂದು ನಿರ್ದಿಷ್ಟ ಸ್ಥಳಕ್ಕೆ ಬದ್ಧವಾಗಿರುತ್ತವೆ. ವ್ಯಕ್ತಿಯೊಂದಿಗೆ ಸ್ಥಳಕ್ಕೆ ಹೆಚ್ಚಿನ ಮಹತ್ವವಿದೆ. ಆದರೆ ಇವು ಹುಟ್ಟಿಕೊಂಡ ಕಾಲವನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಆದರೆ ಇವುಗಳ ಪ್ರಸಾರ ವ್ಯಾಪ್ತಿಯು ಬಹುಮಟ್ಟಿಗೆ ಆ ಸ್ಥಳಕ್ಕೆ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಿಗೆ ಸೀಮಿತವಾಗಿರುತ್ತವೆ. ಇಂತಹ ಐತಿಹ್ಯಗಳಿಗೆ ಹೆಚ್ಚಿನ ಮಹತ್ವ ಇದೆ.

### ಚಳ್ಳಕೆರೆ ಸ್ಥಳದ ಐತಿಹ್ಯ[೨೫]

ಚಳ್ಳಕೆರೆ ಚಿತ್ರದುರ್ಗ ಒಂದು ತಾಲೂಕು ಕೇಂದ್ರ. ಈ ಗ್ರಾಮಕ್ಕೆ ಹಿಂದೆ ಓರಂಗಲ್ಲು ಎಂಬ ಹೆಸರು ಇದ್ದಿತಂತೆ. ಒಮ್ಮೆ ಮಲ್ಲಿಕಾಫರನು ಈ ಓರಂಗಲ್ಲು ಗ್ರಾಮದ ಮೇಲೆ ದಾಳಿ

ಮಾಡಿದನು. ಈ ದಾಳಿಯಿಂದ ಈ ಓರಂಗಲ್ಲು ನಾಶವಾದ ನಂತರ ಚಳ್ಳಕೆರಮ್ಮ ಎಂಬ ದೇವತೆಯು ದೊಡ್ಡೇರಿಯಿಂದ ಚಳ್ಳಿಕೆರೆಗೆ ಬಂದು ನೆಲೆಸಿದಳಂತೆ. ಈ ದೇವತೆಯ ಪ್ರಭಾವದಿಂದ ಚಳ್ಳಕೆರೆ ಎಂಬ ಹೆಸರು ಬಂದಿದೆ ಎಂದು ಸ್ಥಳೀಯರ ಅಭಿಪ್ರಾಯ. ಈ ದೇವಿಯ ದೇವಸ್ಥಾನವನ್ನು ಬೀದರ್–ಶ್ರೀರಂಗಪಟ್ಟಣ ಹೆದ್ದಾರಿ ಪಕ್ಕದಲ್ಲಿ ಚಳ್ಳಕೆರೆಯಲ್ಲಿ ಕಾಣಬಹುದು. ಈ ದೇವತೆಯು ಅಪಾರ ಭಕ್ತ ಸಮೂಹವನ್ನು ಹೊಂದಿದ್ದು, ಪ್ರತಿ ವರ್ಷ ಜಾತ್ರೆ ನಡೆಯುತ್ತದೆ.

ಇನ್ನೊಂದು ಐತಿಹ್ಯ ಪ್ರಕಾರ ನಾಯಕನಹಟ್ಟಿಗೆ ಹೋಗುವ ಮಾರ್ಗದಲ್ಲಿ ಕೆರೆಕಲ್ಲು ಎಂಬ ಕೆರೆ ಇದೆ. ಈ ಕೆರೆಯ ಸುತ್ತಮುತ್ತ ಚಳ್ಳೆಹಣ್ಣಿನ ಮರಗಳು ದಟ್ಟವಾಗಿ ಬೆಳೆದಿದ್ದರಿಂದ ಚಳ್ಳೆಹಣ್ಣಿನಕೆರೆ>ಚಳ್ಳಕೆರೆ ಎಂದು ಹೆಸರು ಬಂದಿದೆ ಎಂದು ಸ್ಥಳೀಯರು ಹೇಳುತ್ತಾರೆ.

**ನೇತ್ರಯ್ಯನ ಹಟ್ಟಿ ಐತಿಹ್ಯ:** ಚಳ್ಳಕೆರೆ ಸಮೀಪದಲ್ಲಿ ಕಂಡುಬರುವ ಒಂದು ಗ್ರಾಮ. ಈ ಗ್ರಾಮದ ಬಳಿ ಪಕ್ಕದ ದಾರಿಯಲ್ಲಿ ಒಂದು ವೀರಗಲ್ಲಿದೆ. ಈ ವೀರಗಲ್ಲಿನ ಕಥೆ ಹೀಗಿದೆ; ಹಿಂದೆ ಒಮ್ಮೆ ಚಿರತೆಯೊಂದಿಗೆ ಹೋರಾಡಿ ಪ್ರಾಣ ತೆತ್ತ ಯರ್‍ರಪಾಪಯ್ಯ ಕುರಿಗಳನ್ನು ಎತ್ತೊಯ್ಯುತ್ತಿದ್ದ ಚಿರತೆಗಳ ಕಾಟದಿಂದ ಈ ಹಳ್ಳಿಯನ್ನು ಪಾರು ಮಾಡಿದನು. ಈ ವ್ಯಕ್ತಿಯನ್ನು ಸ್ಮರಿಸಲು ಈ ಹಳ್ಳಿಯವರು ಆತನ ಹೆಸರಿನಲ್ಲಿ 'ಪರವು' ಮಾಡಿ ವೀರಗಲ್ಲು ನಿಲ್ಲಿಸಿದ್ದಾರೆ.[೨೭]

**ನನ್ನಿವಾಳ ಸ್ಥಳದ ಐತಿಹ್ಯ:** ನನ್ನಿವಾಳ ಚಳ್ಳಕೆರೆ ತಾಲೂಕಿನಲ್ಲಿರುವ ಒಂದು ಗ್ರಾಮ ಈ ಗ್ರಾಮಕ್ಕೆ ಐತಿಹಾಸಿಕ ಹಿನ್ನೆಲೆ ಇದೆ. ಬೇಡರ ಸಾಂಸ್ಕೃತಿಕ ಕೇಂದ್ರ ಹಾಗೂ ಕಟ್ಟೆ ಮನೆಯೂ ಇದೆ. ಈ ಊರಿನ ಮೂಲ ಹೆಸರು 'ರತ್ನಗಿ'. ನಂತರ ಕಟ್ಟೆ ಮನೆಗಳು ಅಸ್ತಿತ್ವಕ್ಕೆ ಬಂದಾಗ (ಉಸುಕುಮರಿ) ಸಾವಡಿ ಎಂದೂ ಕರೆಯುತ್ತಿದ್ದರು. ಈ ಗ್ರಾಮದ ಐತಿಹ್ಯ ಹೀಗಿದೆ. ಹಿಂದೆ ಶಿವ–ಪಾರ್ವತಿಯರು ಕೈಲಾಸದಲ್ಲಿ ಸಂಚರಿಸುತ್ತಿದ್ದಾಗ ನಂದಿ ವಾಹನವನ್ನು ಇಲ್ಲಿನ ಬೆಟ್ಟದ ಮೇಲೆ ಇಳಿಸಿದರಂತೆ ನಂತರ ಇಲ್ಲಿ ಒಂದು ದಿನ ತಂಗಿ ವಾಯುವಿಹಾರ ಮಾಡಿ, ಲಿಂಗವನ್ನು, ನಂದಿಯನ್ನು ಸ್ಥಾಪಿಸಿ ಪೂಜೆ ಮಾಡಿ ಮರಳಿದರಂತೆ. ಶಿವ ಪಾರ್ವತಿಯರು ನಂದಿ ವಾಹನವನ್ನು ಇಳಿಸಿ, ಇಲ್ಲಿಯ ಗುಡ್ಡದ ಮೇಲೆ ಈಶ್ವರಲಿಂಗ ನಂದಿಯನ್ನು ಸ್ಥಾಪಿಸಿ ಹೋಗಿದ್ದಕ್ಕಾಗಿ ನಂದಿವಾಸ ಎಂದು ಕರೆದರು. ನಂದಿ ವಾಹನ ಇಳಿದಿದ್ದರಿಂದ ನಂದಿವಾಸ>ನನ್ನಿವಾಳ ಎಂಬ ಹೆಸರು ಬಂದಿದೆ ಎಂದು ಐತಿಹ್ಯ ಹೇಳುತ್ತದೆ.

**ಕುರುಡಿಹಳ್ಳಿ ಸ್ಥಳದ ಐತಿಹ್ಯ:** ಪ್ರಾಚೀನ ಹೆಸರು ಕುರುಡಜ್ಜಿಹಳ್ಳಿ ಈಗ ಕುರುಡಿಹಳ್ಳಿ ಎಂದು ಕರೆಯಲಾಗುತ್ತಿದೆ. ಪಶ್ಚಿಮ ದಿಕ್ಕಿಗೆ ೨ ಕಿ.ಮೀ. ಅಂತರದಲ್ಲಿ ಹಾಳೂರು ಇದೆ. ಮೊದಲು ಈ ಗ್ರಾಮವು ಹಾಳೂರು ಜಾಗದಲ್ಲಿ ಇತ್ತಂತೆ. ಕಾಲಾಂತರ ಮೊದಲು ಇದ್ದ ಜಾಗದಲ್ಲಿ ತೊಂದರೆಗಳು ಕಂಡಿದ್ದರಿಂದ ಮತ್ತು ಊರಿನಲ್ಲಿ ಒಬ್ಬ ಕುರುಡಿ ಅಜ್ಜಿ ಇದ್ದು, ಆ ಅಜ್ಜಿಗೆ ಯಾರೂ ಸಂಬಂಧಿಕರಿಲ್ಲದೆ ತನ್ನಷ್ಟಕ್ಕೆ ತಾನು ಒಂಟಿಯಾಗಿ ಬಾಳುತ್ತಿದ್ದಳಂತೆ. ಹಾಳೂರಿನಲ್ಲಿ ಜನರಿಗೆ ಮೇಲಿಂದ ಮೇಲೆ ಕಷ್ಟಗಳು ಬರುತ್ತಿದ್ದರಿಂದ ಕುರುಡಿ ಅಜ್ಜಿಯ ಹಳೆ ಊರನ್ನು ತೊರೆದು

ಈಗಿರುವ ಜಾಗದಲ್ಲಿ ಬಂದು ವಾಸಿಸಿದಳಂತೆ. ಬಹಳ ವರ್ಷ ಎರಡು ಕಣ್ಣು ಕಾಣದಿದ್ದರೂ ಒಂದು ಚೂಟಿಯಲ್ಲಿ ತನ್ನ ಕೆಲಸ ಕಾರ್ಯಗಳನ್ನು ಮಾಡಿಕೊಳ್ಳುತ ಮತ್ತು ಎಲ್ಲರೂ ಆಶ್ಚರ್ಯ ಪಡುವ ರೀತಿಯಲ್ಲಿ ಬಾಳಿದಳಂತೆ. ಅಜ್ಜಿಯ ಕಾಲಾಂತರ ಹಳ್ಳಿಗೆ ಕುರುಡಿ ಅಜ್ಜಿಯ ಹಳ್ಳಿ, ಕುರುಡಿಹಳ್ಳಿ ಎಂದು ಕರೆಯುತ್ತಾರೆ ಎಂಬ ಐತಿಹ್ಯವಿದೆ.

**ಜಡೇಕುಂಟೆ ಸ್ಥಳದ ಐತಿಹ್ಯ:** ಪೂರ್ವದಲ್ಲಿ ಗ್ರಾಮಕ್ಕೆ ಜಡೆರಾಯನ ಪಟ್ಟಣ ಎಂದು ಕರೆಯುತ್ತಿದ್ದರಂತೆ. ಗ್ರಾಮದ ಪ್ರಮುಖ ವ್ಯಕ್ತಿಯನ್ನು ನಾಯಕ, ಒಡೆಯ, ಪಾಳೆಗಾರ, ರಾಯರು ಎಂದು ಕರೆಯುತ್ತಿದ್ದುದು ವಾಡಿಕೆಯಾಗಿತ್ತು. ಗ್ರಾಮದ ಜಡೆರಾಯನಿಗೆ ಕೂದಲು ಸೊಂಪಾಗಿ ಬಹಳ ಉದ್ದವಾಗಿ ಬೆಳೆದಿದ್ದು ಜಡೇಉಳ್ಳರಾಯ, ಜಡೇರಾಯ ಎಂದು ಕರೆಯುತ್ತಿದ್ದು, ಜಡೇರಾಯನ ಪಟ್ಟಣವೆಂದು ಹೆಸರು ಪಡೆದಿರಬೇಕು. ನೀರಿನ ಜೋಡಿ ಕುಂಟೆಗಳು ಹಳ್ಳಿಯ ಸಮೀಪ ಇದ್ದುದರಿಂದ ಜೋಡಿಕುಂಟೆ ಕ್ರಮೇಣ ಜಡೇಕುಂಟೆಯಾಗಿದೆ. ಮಣ್ಣಿನ ಸೊಗಡು ಮಣ್ಣಿನ ಫಲವತ್ತತೆ ನೀರು ಪವಿತ್ರತೆಯನ್ನು ಪಡೆದುಕೊಂಡಿದ್ದು ಈ ನೀರಿನಿಂದ ತಲೆಸ್ನಾನ ಮಾಡಿದರೆ ತಲೆಗೂದಲು ಹೂವಿನಂತೆ, ಮೃದುವಾಗಿ ಕಪ್ಪಾಗಿ, ಸೊಪಾಗಿ, ಉದ್ದವಾಗಿ ಬೆಳೆಯುತ್ತಿದ್ದವಂತೆ. ನೀರಿನ ಕುಂಟೆಗಳು ಮತ್ತು ಜಡೇ ಸೇರಿ ಜಡೇಕುಂಟೆ ಎಂದು ಕರೆಯುತ್ತಾರೆ ಎಂಬುದು ಮತ್ತೊಂದು ಐತಿಹ್ಯ.

**ಬುಡ್ನಹಟ್ಟಿ ಸ್ಥಳದ ಐತಿಹ್ಯ:** ಐತಿಹಾಸಿಕ ಹಿನ್ನೆಲೆ ಇರುವುದಕ್ಕೆ ಅಳಿದುಳಿದಿರುವ ಕೋಟೆ ಸಾಕ್ಷಿಯಾಗಿದೆ. ಊರಿನ ಮಧ್ಯ ಭಾಗದಲ್ಲಿ ಕೋಟೆಯ ದ್ವಾರಬಾಗಿಲು ಇದೆ. ಪಾಳೆಯಗಾರರ ಕಾಲದಲ್ಲಿ ಬುಡ್ಡನಾಯಕ ಎಂಬ ವ್ಯಕ್ತಿ ಊರಿನ ಸುತ್ತ ಕೋಟೆ ಕಟ್ಟಿ, ಬುಡ್ಡೆಕಲ್ಲು ಮತ್ತು ದಿಕ್ಕುಕಟ್ಟಿ ಜನ ವಸತಿಹಟ್ಟಿಯನ್ನು ನಿರ್ಮಿಸಿದನೆಂದು ಹೇಳುತ್ತಾರೆ. ಬುಡ್ಡನಾಯಕನು ಕಟ್ಟಿ ಬೆಳೆಸಿದ ಊರಾದ್ದರಿಂದ ಬುಡ್ಡನಾಯಕ ಹಟ್ಟಿ ಎಂದೇ ಹೆಸರು ಪಡೆದು, ಕಾಲಕ್ರಮೇಣ ಬುಡ್ನಹಟ್ಟಿ ಎಂದಾಗಿದೆ ಎಂಬ ಐತಿಹ್ಯವಿದೆ.

**ಬೊಮ್ಮಸಮುದ್ರ ಸ್ಥಳದ ಐತಿಹ್ಯ:** ಬೊಮ್ಮಚಂದ್ರ ಎಂಬುವನು ಊರನ್ನು ಕಟ್ಟುವ ಕಾರ್ಯದಲ್ಲಿ ಪ್ರಮುಖ ವ್ಯಕ್ತಿಯಾದ್ದರಿಂದ ಆತನ ಹೆಸರಿನಿಂದ ಊರಿಗೆ ಕರೆಯುತ್ತಿದ್ದು ಬೊಮ್ಮಚಂದ್ರ ಕ್ರಮೇಣ ಬೊಮ್ಮಸಂದ್ರವಾಗಿ ಈಗ ಬೊಮ್ಮಸಮುದ್ರ ಎಂಬ ಹೆಸರಿನಿಂದ ಕರೆಯಲಾಗುತ್ತಿದೆ ಎಂಬ ಐತಿಹ್ಯವಿದೆ.

**ಮೀರಾಸಾಬಿಹಳ್ಳಿ ಸ್ಥಳದ ಐತಿಹ್ಯ:** ಮೀರಾಹುಸೇನ್ ಸಾಬನಹಳ್ಳಿ ಎಂದು ಕರೆಯುತ್ತಿದ್ದು, ಕಾಲಾಂತರದಲ್ಲಿ ಮೀರಾಸಾಬಿಹಳ್ಳಿಯಾಯಿತು. ಹಳ್ಳಿಯ ಉಗಮದ ನಂತರ ಊರಿನಲ್ಲಿ ಮುಸ್ಲಿಂ ಜಾತಿಯ ಒಬ್ಬ ಬಲಿಷ್ಠ ವ್ಯಕ್ತಿ ಹುಸೇನ್‌ಸಾಬ್ ಇದ್ದನಂತೆ. ಈತನ ಬಹು ಪರಾಕ್ರಮಿ ಹಾಗೂ ಗಟ್ಟಿಗನಾಗಿದ್ದು ಯಾರಿಂದಲೂ ಈತನನ್ನು ಸೋಲಿಸಲಾಗುತ್ತಿರಲಿಲ್ಲವಂತೆ. ರಾಜರ ಆಳ್ವಿಕೆಯ ಕಾಲದಲ್ಲಿ ಎಷ್ಟೋ ಜನ ಈತನ ವಿರುದ್ಧ ಕುಸ್ತಿಗೆ ಬಂದು ಸೋತು ಹೋಗಿದ್ದರಂತೆ.

ಕೆಲವಾರು ಊರುಗಳಿಗೆ ಹೋಗಿ ಕುಸ್ತಿ ಪಂದ್ಯಗಳಲ್ಲಿ ಗೆದ್ದು ಬಂದಿದ್ದು ಮೀರಿದ ಹುಸೇನ್ ಸಾಬರ್ ಇರುವ ಹಳ್ಳಿ ಕ್ರಮೇಣ ಮೀರಾಸಾಬಿಹಳ್ಳಿಯಾಗಿದೆ ಎನ್ನುವ ಐತಿಹ್ಯ.[೨೭]

ಕರೀಕೆರೆ ಸ್ಥಳದ ಐತಿಹ್ಯ: ನಲ್ಲಜವರಾಯ ದೇವರನ್ನು ಕಪ್ಪು ಕೆರೆಯ ದೇವರು ಕರಿಕೆರೆಯ ದೇವರು, ತೆಲುಗಿನಲ್ಲಿ ನಲ್ಲ ಸೆರ್ವರಾಯ ದೇವುಡು ಎಂದು ಕರೆಯುತ್ತಿದ್ದು, ನಲ್ಲ ಸೆರ್ವ ಎಂಬುದನ್ನು ಕನ್ನಡದಲ್ಲಿ ಕಪ್ಪು ಕೆರೆ ಎಂದು ಕರೆಯುತ್ತಿದ್ದರ. ಮತ್ತು ಹಿಂದಿನ ಕಾಲದಲ್ಲಿ ಕೆರೆ ಸದಾ ನೀರು ಇರುತ್ತಿತ್ತು. ಈ ನೀರಿನಿಂದ ಕಪ್ಪು ಗದ್ದೆಯಲ್ಲಿ ಕೃಷಿ ಚಟುವಟಿಕೆ ನಡೆಯುತ್ತಿತ್ತು. ಗದ್ದೆಗಳಲ್ಲಿನ ಕೆರೆ ಮಣ್ಣಿನಿಂದ ಕೆಲಸ ಮಾಡುತ್ತಿದ್ದು, ಕರೆ (ಕಪ್ಪು) ಕೆಸರು ಜನರು ಮೈಕೈಗಳಿಗೆ ಮೆತ್ತಿಕೊಂಡು ಜನರೂ ಸಹ ನಲ್ಲ ಸೆರ್ವ (ಕೆರೆ ಮನುಷ್ಯರು)ಗಳಂತೆ ಕಾಣುತ್ತಿದ್ದರು. ಈ ಎಲ್ಲಾ ಕಾರಣಗಳಿಂದ ಕಪ್ಪು ಕೆರೆಯ ಊರು ಕರೀಕೆರೆ, ಕರೇದೇವರಹಳ್ಳಿ, ಕರೇ ಮನುಷ್ಯರಹಳ್ಳಿ ಎಂದು ಕರೆಯುತ್ತಿದ್ದು, ಕ್ರಮೇಣ ಕರೀಕೆರೆ ಕರೀಕೆರೆಯಾಗಿದೆ ಎಂಬ ಐತಿಹ್ಯವಿದೆ.[೨೮]

ಕಲಮರಹಳ್ಳಿ ಸ್ಥಳದ ಐತಿಹ್ಯ: ಕೊರಮರು ಇಲ್ಲಿನ ಮೂಲ ನಿವಾಸಿಗಳು ಗ್ರಾಮಕ್ಕೆ ಕೊರಮರಹಟ್ಟಿ>ಕೊರಮರಹಳ್ಳಿ ಎಂಬ ಹೆಸರು ಬಂತೆಂದು ಹಾಗೂ ಕಲಾವಿದರ ನೆಲೆಯಾಗಿದ್ದರಿಂದ ಕಲೆಮಾರನಹಳ್ಳಿಯೇ ಕಲಮರಹಳ್ಳಿಯಾಯಿತೆಂದೂ, ವೇದಾವತಿ ನದಿ ತೀರದ ಪ್ರದೇಶವಾಗಿರುವುದರಿಂದ ಕಲ್ಲಮರಳಿನಹಳ್ಳಿ ಎನ್ನುವುದು ಕಲಮರಹಳ್ಳಿಯಾಗಿದೆ ಎಂಬ ಐತಿಹ್ಯಗಳಿವೆ.

ಕಮ್ಮತ್‌ಮರಿಕುಂಟೆ ಸ್ಥಳದ ಐತಿಹ್ಯ: ಪೂರ್ವದ ಹೆಸರು ಮಾರಿಕುಂಟೆ ಎಂದಿದ್ದು, ಈಗ ಕಮ್ಮತ್ ಮರಿಕುಂಟೆ ಎಂದು ಕರೆಯುತ್ತಾರೆ. ಪೂರ್ವ ಆಗ್ನೇಯ ಭಾಗಕ್ಕೆ ಅನತಿ ದೂರದಲ್ಲಿ ಗರಣಿ ಹಳ್ಳದ ದಡದಲ್ಲಿ ಹಳೇ ಊರು ಇದ್ದುದರ ಬಗ್ಗೆ ಕುರುಹುಗಳಿವೆ. ಏಳು ಮಂದಿ ಅಕ್ಕಂದಿರ ವಿಗ್ರಹ, ಗಣೇಶ, ಶಿವ, ಷಣ್ಮುಖ, ನಾಗರ ವಿಗ್ರಹಗಳು ಮಾರಮ್ಮನ ದೇವಸ್ಥಾನ ಕಂಡುಬರುತ್ತದೆ. ಒಂದು ನೀರು ನಿಲ್ಲುವ ಗುಂಡಿ, ಗಣೆ ಇದ್ದು ಈ ಗುಂಡಿಯ ನೀರನ್ನು ಮಾರಮ್ಮ ದೇವರ ಪೂಜೆಗೆ ಬಳಸುತ್ತಿದ್ದರಂತೆ. ಆದ್ದರಿಂದ ಅದನ್ನು ಮಾರಿಯ ಗುಡಿ, ಕುಂಟೆ ಎಂದು ಕರೆಯುತ್ತಿದ್ದರಂತೆ. ನೀರಿನ ಕುಂಟೆಯ ಬಳಿ ಕಮರದ ಮರಗಳು ಹೆಚ್ಚಿದ್ದರಿಂದ ಮತ್ತು ಈ ಜಾಗವು ಜನವಸತಿ ಪ್ರದೇಶವಾದ ನಂತರ ಕಮರದ ಮರಗಳು ಕುಂಟೆ ಎಂದು ಕರೆಯುತ್ತಿದ್ದು, ಕ್ರಮೇಣ ಕಮ್ಮತ್ ಮರಿಕುಂಟೆಯಾಗಿರುವ ಸಾಧ್ಯತೆ ಇದೆ. ಕಾಲಾಂತರದಲ್ಲಿ ಹಳ್ಳಿಗೆ ದೊಡ್ಡ ಬರಗಾಲ ಬಂದೊದಗಿ, ಜನರು ಹಳ್ಳಿಯನ್ನು ತೊರೆದು ವಲಸೆ ಹೋದರಂತೆ. ಆದರೆ ಮಾರಿಕುಂಟೆ ಎಂಬ ಹೆಸರು ಹಾಗೆಯೇ ಉಳಿಯಿತು. ಆಳೂರು ತೊರೆದು ಹೋದ ಮೇಲೆ ಕೆಲವೇ ಕೆಲವರು ತೋಟ, ಗದ್ದೆಗಳನ್ನು ಬಿಟ್ಟು ಹೋಗದೆ ಅಲ್ಲೇ ಉಳಿದರು. ಬೇರೆ ಊರಿನಿಂದ (ಆಂಧ್ರದಿಂದ) ಕಮ್ಮಾರನೊಬ್ಬ ಕೆಲಸ ಹರಸಿಕೊಂಡು ಬಂದಿದ್ದು, ಅವನ ಕಾರ್ಯ ವೈಕರ್ಯ ಸುತ್ತಲ ಊರಿನವರೂ ಆಯುಧಗಳು, ಕೃಷಿ ಸಲಕರಣೆಗಳನ್ನು ಮಾಡಿಸಿಕೊಂಡು ಹೋಗುತ್ತಿದ್ದರಂತೆ. ಕಬ್ಬಿಣದ ಆಯುಧಗಳಿಗೆ ಹದ ಕೊಟ್ಟು ಮಾಡಿದ ಅಸ್ತ್ರಗಳು ಮಚ್ಚು

ಕೊಡಲಿಗಳು, ಕಲ್ಲು ಕಡೆದರೂ ಮೊಡ ಆಗುತ್ತಿರಲಿಲ್ಲವಂತೆ. ಅಷ್ಟರಮಟ್ಟಿಗೆ ಈ ಕಮ್ಮಾರ ಹೆಸರು ಮಾಡಿದ್ದರು. ಮೊದಲೇ ಹಳ್ಳಿಗೆ ಮಾರಿಕುಂಟೆ ಎಂದಿದ್ದು ನಂತರ ಕಮ್ಮಾರರ ಮಾರಿಕುಂಟೆ ಕಾಲಕ್ರಮೇಣ ಜನರ ಆಡು ಭಾಷೆಯಲ್ಲಿ ಕಮ್ಮತ್ ಮರಿಕುಂಟೆ ಆಗಿದೆ ಎಂದು ಮತ್ತೊಂದು ಐತಿಹ್ಯವಿದೆ.[೨೯]

**ಕಸ್ತೂರಿ ತಿಮ್ಮನಹಳ್ಳಿ ಸ್ಥಳದ ಐತಿಹ್ಯ:** ಊರಿನ ಸುತ್ತಮುತ್ತಲೂ ಗುಂಪು ಗುಂಪಾಗಿ ಕಸ್ತೂರಿ ಜಾಲಿ ಗಿಡಗಳು ಬೆಳೆದಿರುವುದರಿಂದ ಗ್ರಾಮಕ್ಕೆ ಕಸ್ತೂರಿ ಜಾಲಿಹಳ್ಳಿ ಎಂದು ಕರೆದರಂತೆ. ಮತ್ತು ರಾಜರ ಕಾಲದಲ್ಲಿ ಕಸ್ತೂರಿ ಮಾತ್ರೆ (ಕಸ್ತೂರಿ ಕಾಳು)ಗಳನ್ನು ಗ್ರಾಮದವರು ಬೇರೆ ಬೇರೆ ಊರುಗಳಿಂದ ಹೋಗಿ ಮಾರಾಟ ಮಾಡುತ್ತಿದ್ದರಂತೆ. ಇದರಿಂದ ಗ್ರಾಮಕ್ಕೆ ಕಸ್ತೂರಿತಿಮ್ಮನಹಳ್ಳಿ ಎಂದು ಕರೆಯುತ್ತಿದ್ದಾರೆಂಬ ಐತಿಹ್ಯವಿದೆ.

**ಗಂಜಿಗುಂಟೆ ಸ್ಥಳದ ಐತಿಹ್ಯ:** ಚಳ್ಳಕೆರೆ ಪಟ್ಟಣದಿಂದ ನೈರುತ್ಯಕ್ಕೆ ಇರುವ ಈ ಗ್ರಾಮದ ಹೆಸರಿನ ಕುರಿತು ಐತಿಹ್ಯವೊಂದಿದೆ. ಅದೇನೆಂದರೆ, ಒಮ್ಮೆ ಈ ಸ್ಥಳದಲ್ಲಿ ರಾಜ ಹಾಗೂ ಸೈನಿಕರು ಬೀಡುಬಿಟ್ಟು ಆಹಾರ ತಯಾರಿಸಿದ್ದರಂತೆ. ಆಹಾರವನ್ನು ತಯಾರಿಸುವಾಗ ಅಕ್ಕ ಪಾತ್ರೆಯಿಂದ ಗಂಜಿ ಉಕ್ಕಿ ಸುರಿದುದರಿಂದ ಗಂಜಿಗಟ್ಟಿ ಎಂಬ ಹೆಸರು ಬಂದಿತೆಂದು ಹೇಳುತ್ತಾರೆ. ಆದರೆ ವಾಸ್ತವವಾಗಿ ಈ ಸ್ಥಳದಲ್ಲಿ ಶಿಲಾಯುಗ ಸಂಸ್ಕೃತಿಗೆ ಸೇರಿದ ಪ್ರಾಚ್ಯಾವಶೇಷಗಳು ಕಂಡುಬಂದಿದ್ದು ಇಲ್ಲಿ ಶಿಲಾಯುಗದ ಜನರು ಬದುಕನ್ನು ಸವೆಸಿದರು ಎಂದು ನಮಗೆ ಆಧಾರ ಸಮೇತ ತಿಳಿದು ಬರುತ್ತದೆ. ಈ ರಾಜನು ಬೀಡುಬಿಟ್ಟಿರುವ ಕುರಿತು ಇರುವ ಐತಿಹ್ಯ ಎಷ್ಟರಮಟ್ಟಿಗೆ ನಿಜವೆಂದು ಯೋಚಿಸಬೇಕಾಗಿದೆ.

### ವ್ಯಕ್ತಿಪ್ರಧಾನ ಐತಿಹ್ಯಗಳು

ಈ ಐತಿಹ್ಯಗಳಲ್ಲಿ ಅಸಾಮಾನ್ಯವಾದ ಅಥವಾ ವಿಶಿಷ್ಟವಾದ ವ್ಯಕ್ತಿಯೊಬ್ಬನ ಸಾಧನೆಯ ನಿರೂಪಣೆಯಿರುತ್ತದೆ. ಐತಿಹ್ಯದ ಉಳಿದೆಲ್ಲಾ ವಿವರಗಳನ್ನು ಆ ವ್ಯಕ್ತಿಯ ಸಾಧನೆಗೆ ಪೋಷಕವಾಗಿಯೇ ಬರುತ್ತದೆ. ವ್ಯಕ್ತಿ ಒಂದು ನಿರ್ದಿಷ್ಟ ಸ್ಥಳಕ್ಕೆ ಹುಟ್ಟಿಕೊಂಡಿದ್ದರು. ಅಲ್ಲಿ ಸ್ಥಳದ ಮಹತ್ವವನ್ನು ಮೀರಿ ವ್ಯಕ್ತಿತ್ವ ಕೆಲಸ ಮಾಡುತ್ತಿರುತ್ತದೆ. ಅಲ್ಲದೆ ವ್ಯಕ್ತಿಯಿಂದಾಗಿಯೇ ಆ ಸ್ಥಳಕ್ಕೆ ಆ ಹೆಸರು ಬಂದಿರಬಹುದು. ವ್ಯಕ್ತಿಪ್ರಧಾನ ಐತಿಹ್ಯಗಳಲ್ಲಿ ಅಲ್ಲಿನ ಘಟನೆಗೆ ಸಂಬಂಧಿಸಿದ ಎರಡು ಅಂಶಗಳು ಮುಖ್ಯವಾಗುತ್ತದೆ. ವ್ಯಕ್ತಿಯ ಪಾತ್ರವು ಇಲ್ಲಿ ಪ್ರಧಾನವಾಗಿರುತ್ತದೆ. ವ್ಯಕ್ತಿಯ ಸುತ್ತು ಐತಿಹ್ಯದ ಘಟನೆ ಸನ್ನಿವೇಶಗಳು ಹಬ್ಬಿರುತ್ತವೆ. ಎಲ್ಲಾ ವ್ಯಕ್ತಿಗಳ ಬಗೆಗೂ ಐತಿಹ್ಯ ಹುಟ್ಟಿಕೊಳ್ಳುವುದಿಲ್ಲ. ಐತಿಹ್ಯ ಹುಟ್ಟುಬೇಕಾದರೆ ಆ ವ್ಯಕ್ತಿ ಅಸಾಮಾನ್ಯ ವಿಶಿಷ್ಟನಾಗಿರಬೇಕು.

**ತಿಮ್ಮಪ್ಪನಿಗೆ ಸಂಬಂಧಿಸಿದ ಐತಿಹ್ಯ:** ತಿಮ್ಮಪ್ಪ ಎಂಬ ವ್ಯಕ್ತಿ ಗೊಲ್ಲ ಸಮುದಾಯಕ್ಕೆ ಸೇರಿದವನು. ಈತನು ಕುರಿಗಳನ್ನು ಪಾಲನೆ ಮಾಡುತ್ತಿದ್ದನು. ಈತನಿಗೆ ತಮ್ಮಂದಿರು ತಂಗಿಯರು ಇದ್ದರು. ಅವರು ವ್ಯವಸಾಯ ಕೆಲಸ ಮಾಡುತ್ತ ಜೀವನ ಸಾಗಿಸುತ್ತಿದ್ದರು. ಇವರು ತಮ್ಮ

ಕುರಿಗಳಿಗೆ ಹೊಲದಲ್ಲಿ ಮಂದೆಯನ್ನು ಇಟ್ಟುಕೊಂಡಿದ್ದರು. ಪ್ರತಿದಿನ ಕುರಿಗಳನ್ನು ಕಾಯಲು ಅಡವಿಗೆ ಹೋಗಿ ಬರುತ್ತಿದ್ದರು ಎಂಬುದು ಐತಿಹ್ಯದಲ್ಲಿ ಉಲ್ಲೇಖವಾಗಿದೆ.

**ಅರವಜ್ಜಿ ಐತಿಹ್ಯ:** ಅರವಜ್ಜಿಯ ಮೂಲ ನನ್ನಿವಾಳ. ಈಕೆ ಗಾದ್ರಿಪಾಲನಾಯಕನ ಸಮಕಾಲೀನಳು. ಈಕೆಯ ಸಮಾಧಿ ನನ್ನಿವಾಳ ಸಮೀಪವಿದೆ. ಅರವಜ್ಜಿ ಎನ್ನುವುದು ಈಕೆಯ ಹೆಸರು. ಈ ಸಮಾಧಿ ಇರುವ ಸ್ಥಳವನ್ನು 'ಅರವಬ್ಬ ಏಣು' ಎನ್ನುತ್ತಾರೆ. 'ಏಣು' ಎಂದರೆ ದಿಬ್ಬ ಎಂದರ್ಥ. ಗಾದ್ರಿಪಾಲನಾಯಕನು ಹುಲಿಗಳಿಂದ ತಪ್ಪಿಸಿಕೊಂಡು ವಲಸೆ ಹೋಗುವಾಗ ಈತನ ಜೊತೆಯಲ್ಲಿ ಈತನ ಸೋದರತೆಯಾದ ಅರವಜ್ಜಿ ಇದ್ದಳು. ಜೊತೆಗೆ ಜಜಿಲಬ್ಬಗುಡ್ಡೆಬ್ಬ, ಗಟ್ಟಿಮೀದಬ್ಬ ಯರದಾಯಬ್ಬ ಎಂಬ ಮಹಿಳೆಯರಿದ್ದರು. ಇವರಿಗೆ ವಯಸ್ಸಾಗಿತ್ತು. ವಲಸೆ ಹೋಗುವಾಗ ಮಾರ್ಗ ಮಧ್ಯದಲ್ಲಿ ಒಬ್ಬೊಬ್ಬರಾಗಿ ಅಸುನೀಗುತ್ತಾರೆ. ಇವರನ್ನೆಲ್ಲಾ ಅಲ್ಲಲ್ಲಿಯೇ ಸಮಾಧಿ ಮಾಡುತ್ತಾರೆ. ಅರವಜ್ಜಿ ಸತ್ತಾಗ ಸಮಾಧಿ ಮಾಡಿ ಗಾದ್ರಿಪಾಲನಾಯಕ ಪೂಜೆ ಮಾಡಿ ತನ್ನ ಪ್ರಯಾಣವನ್ನು ಮುಂದುವರಿಸುತ್ತಾನೆ ಎಂಬುದು ಐತಿಹ್ಯದಲ್ಲಿ ಉಲ್ಲೇಖವಾಗಿದೆ.

**ಗರೀಬ್‌ಸಾಬಿ ಮಠದ ಐತಿಹ್ಯ:** ಚಳ್ಳಕೆರೆಯಿಂದ ಐದು ಕಿ.ಮೀ. ದೂರದಲ್ಲಿದೆ. ಇದು ಮುಸ್ಲಿಂ ಸಂತನೊಬ್ಬನ ಸಮಾಧಿಯಾಗಿದ್ದು, ಇದನ್ನು ಗರೀಬ್‌ಸಾಬಿ ಮಠ ಎಂದು ಕರೆಯುತ್ತಾರೆ. ಈ ಸಂತ ಯಾರು, ಎಲ್ಲಿಯವರು, ಯಾವಾಗ ಇಲ್ಲಿಗೆ ಬಂದ ಎಂಬ ಖಚಿತ ಮಾಹಿತಿಗಳು ಯಾರಿಗೂ ತಿಳಿದಿಲ್ಲವೆಂದೇ ಹೇಳಬಹುದು. ಈತನ ಸುತ್ತ ಐತಿಹ್ಯಗಳು ಮಾತ್ರ ದೊರೆಯುತ್ತವೆ. ಈ ಪ್ರದೇಶಕ್ಕೆ ಹಿಂದೆ ದೊಡ್ಡೇರಿ ಎಂದು ಕರೆಯುತ್ತಿದ್ದರು. ಈಗ ಹಾಳು ದೊಡ್ಡೇರಿ ಎಂಬ ಐತಿಹಾಸಿಕ ಸ್ಥಳದ ನೆಲೆಯೇ ಆಗಿದೆ. ಹಿಂದೆ ಈ ದೊಡ್ಡೇರಿಯನ್ನು ನವಾಬರು ಆಳುತ್ತಿದ್ದಾಗ, ಈ ತಂಡದಲ್ಲಿ ಬಂದ ಪಕೀರರು ಇರಬಹುದು, ಆದರೆ ಐತಿಹ್ಯ ಪ್ರಕಾರ ಇವರು ಪೆನುಗೊಂಡದ ಕಡೆಯಿಂದ ಬಂದರಂತೆ. ಇವರು ಯಾರ ಜೊತೆಯಲ್ಲು ಬೆರೆಯದೆ ಸದಾ ಒಬ್ಬಂಟಿಯಾಗಿ ಇರುತ್ತಿದ್ದರಂತೆ. ಹಳ್ಳಕ್ಕೆ ದನ ಕಾಯಲು ಬಂದ ಹುಡುಗರು ಕೀಟಲೆ ಮಾಡಿದರು ಅವರು ಮಿಸುಕುತ್ತಿರಲಿಲ್ಲವಂತೆ. ಕೊನೆಗೆ ಅವರು ಸತ್ತಾಗ ಅಲ್ಲಿಯೇ ಸಮಾಧಿ ಮಾಡಿದರಂತೆ. ಇದನ್ನೇ ಜನ ಗರೀಬ್‌ಸಾಬಿ ಮಠ ಎಂದು ಕರೆಯುತ್ತಾರೆ.

ಜಗಲೂರಜ್ಜನ ಐತಿಹ್ಯ: ಚಳ್ಳಕೆರೆ ಪಟ್ಟಣದಿಂದ ಪಶ್ಚಿಮಕ್ಕೆ ೨ ಕಿ.ಮೀ. ದೂರದಲ್ಲಿರುವ ಜಗಲೂರು ಪಾಪನಾಯಕನ ಕುರಿತು ಐತಿಹ್ಯವೊಂದಿದೆ. ಮ್ಯಾಸಬೇಡರು ದೇವಸ್ಥಾನಕ್ಕೆ ಈ ವ್ಯಕ್ತಿಯನ್ನು ಏರಿಸಿದ್ದಾರೆ. ಈ ವ್ಯಕ್ತಿಯು ಸುಮಾರು ೩೦೦–೪೦೦ ವರ್ಷಗಳ ಹಿಂದೆ ತಮ್ಮ ವೃತ್ತಿಯಾದ ಪಶುಪಾಲನೆಯನ್ನು ಮಾಡಿಕೊಂಡು ಇಲ್ಲಿಯೇ ಒಂದು ಏಪೌಳಿಹಿಯನ್ನು ನಿರ್ಮಿಸಿಕೊಂಡು ವಾಸಿಸುತ್ತಿದ್ದನಂತೆ. ಈತನು ವೈಷ್ಣವ ಪಂಥದ ಸಂತನೆಂದು ತಿಳಿಯುತ್ತಾರೆ. ಈತನ ಬಗ್ಗೆ ಇರುವ ದಂಥಕತೆಯಲ್ಲಿ ಇವನು ತಿರುಪತಿ ತಿಮ್ಮಪ್ಪನ ಭಕ್ತನಾಗಿದ್ದು, ಅಲ್ಲಿಗೆ ಯಾತ್ರೆ ಹೋಗಿ ಬಂದಿದ್ದಾಗಿಯೂ ತಿಳಿದುಬರುತ್ತದೆ. ಈತನನ್ನು ಮ್ಯಾಸಬೇಡರು ತಮ್ಮ ಆರಾಧ್ಯ ದೈವವೆಂದು ಆರಾಧಿಸುತ್ತಾರೆ.

## ಅಡಿ ಟಿಪ್ಪಣಿಗಳು



೧. ವಿಶ್ವನಾಥ, ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ, ೨೦೦೦, ದೇವಿ ಪ್ರಕಾಶನ, ಮೈಸೂರು, ಪು. ೧

೨. ಮಂಜುನಾಥ, ಯಳಂದೂರು ತಾಲೂಕಿನ ಇತಿಹಾಸ ಮತ್ತು ಪುರಾತತ್ವ, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೬, ಪು. ೫೨

೩. ಪೂರ್ವೋಕ್ತ ವಿಶ್ವನಾಥ, ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ, ಪು. ೩

೪. ವಿಶ್ವನಾಥಯ್ಯ ಸಿ.ಎಂ., ಕಡೂರು ತಾಲೂಕಿನ ಸ್ಥಳನಾಮಗಳು, ೨೦೦೬, ಜ್ಞಾನಭಾರತಿ ಪ್ರಕಾಶನ, ಕಡೂರು, ಪು.೭

೫. ಗೋಪಾಲಕೃಷ್ಣ ವಿ., ಸ್ಥಳನಾಮ ಅಧ್ಯಯನಗಳು, ೧೯೮೭, ಪು. ೬೦೬

೬. ಕ್ಷೇತ್ರಕಾರ್ಯ ವರದಿ

೭. ಕ್ಷೇತ್ರಕಾರ್ಯ ವರದಿ



೮. ಕ್ಷೇತ್ರಕಾರ್ಯ ವರದಿ

೯. ಕ್ಷೇತ್ರಕಾರ್ಯ ವರದಿ

೧೦. ಚಿತ್ರದುರ್ಗ ಜಿಲ್ಲಾದರ್ಶನ, ಟಿ. ಗಿರಿಜ, ಪು. ೧೮೬

೧೧. ಚಿದಾನಂದಮೂರ್ತಿ ಎಂ., ೨೦೦೨, ಜನ, ಜನಪದ, ಜಾನಪದ, ಸ್ವಪ್ನ ಬುಕ್‌ಹೌಸ್, ಬೆಂಗಳೂರು, ಪು. ೬೯

೧೨. ವೀರಣ್ಣ ದಂಡೆ, ೧೯೯೩, ಕನ್ನಡ ಜಾನಪದ ಪ್ರಜ್ಞೆ, ಕವಿರಾಜ ಮಾರ್ಗ ಪ್ರಕಾಶನ, ಕಲಬುರ್ಗಿ, ಪು. ೧೬೧

೧೩. ಲಿಂಗಯ್ಯ ಡಿ. ಮತ್ತು ಸಂಧ್ಯಾರೆಡ್ಡಿ ಕೆ.ಆರ್., ೧೯೯೭, ಜಾನಪದ ಸ್ವರೂಪ ಮತ್ತು ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಪು. ೩೪

೧೪. ಲಕ್ಕಪ್ಪಗೌಡ ಎಚ್.ಜೆ. (ಸಂ) ೧೯೯೧, ಜಾನಪದ ಮತ್ತು ಪೂರಕ ಕ್ಷೇತ್ರಗಳು, ಬಿ.ಆರ್. ಪ್ರಾಜೆಕ್ಟ್, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ, ಪು. ೩೫

೧೫. ಚಿದಾನಂದಮೂರ್ತಿ ಎಂ., ಜನ-ಜನಪದ-ಜಾನಪದ, ಪೂರ್ವೋಕ್ತ, ಪು. ೭೧

೧೬. ವೀರಣ್ಣ ದಂಡೆ, ಕನ್ನಡ ಜಾನಪದ ಪ್ರಜ್ಞೆ, ಪೂರ್ವೋಕ್ತ, ಪು. ೧೬೨

೧೭. ನಮ್ಮೂರಿನಿಂದ ಹಿಮಾಲಯದತ್ತ, ಲೇಖಕರು ಡಿ.ಎಸ್. ಶಿವಕುಮಾರ್, ವಕೀಲರು, ದೊಡ್ಡೇರಿ, ಪು. ೧೧೫

೧೮. ಪೂರ್ವೋಕ್ತ ಪು. ೧೧೬

೧೯. ಪೂರ್ವೋಕ್ತ ಪು. ೧೧೭

೨೦. ಕ್ಷೇತ್ರಕಾರ್ಯ ವರದಿ

೨೧. ಸುಬ್ಬಣ್ಣ ರೈ ಎ., ೧೯೯೪, ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು, ಪು. ೧೦

೨೨. ಕ್ಯಾತನಹಳ್ಳಿ ರಾಮಣ್ಣ (ಸಂ), ೧೯೭೬, ಬೀದರ್ ಜಿಲ್ಲೆಯ ಜಾನಪದ ಕಥೆಗಳು, ಪು. ೮೦

೨೩. ಲಕ್ಷ್ಮಣ್ ತೆಲಗಾವಿ (ಸಂ), ಸ್ಥಳೀಯ ಚರಿತ್ರೆ, ಪೂರ್ವೋಕ್ತ, ಪು. ೨೭

೨೪. ಕನ್ನಡ ವಿಷಯ ವಿಶ್ವಕೋಶ, (ಸಂ), ೧೯೭೦, ಸಂಪುಟ–೩, ಪು. ೨೫೮

೨೫. ಚಿತ್ರದುರ್ಗ ಜಿಲ್ಲಾ ದರ್ಶಿನಿ, ಟಿ. ಗಿರಿಜ, ಪೂರ್ವೋಕ್ತ, ಪು. ೧೮೬

೨೬. ಕ್ಷೇತ್ರಕಾರ್ಯ ವರದಿ

೨೭. ಕರ್ನಾಟಕ ಗ್ರಾಮ ಚರಿತ್ರೆ ಕೋಶ, ಚಿತ್ರದುರ್ಗ, ಪ್ರಧಾನ ಸಂಪಾದಕ ಪ್ರೊ.ಡಿ.ಬಿ. ನಾಯಕ, ಪು. ೩೧೦

೨೮. ಪೂರ್ವೋಕ್ತ, ಪು. ೧೩೭

೨೯. ಪೂರ್ವೋಕ್ತ, ಪು. ೧೪೧



# ಅಧ್ಯಾಯ: ನಾಲ್ಕು

# ದೇವಾಲಯಗಳು

## ದೇವಾಲಯಗಳ ಉಗಮ ಮತ್ತು ಬೆಳವಣಿಗೆ

ಭಾರತೀಯ ಪರಂಪರೆಯಲ್ಲಿ ದೇವರ ಕಲ್ಪನೆ, ದೇವಾಲಯಗಳ ಉಗಮ, ನಿರ್ಮಾಣ, ವಿಕಾಸ ಮುಂತಾದ ಸಂಗತಿಗಳ ಬಗ್ಗೆ ತಿಳಿಯುವುದು ಮುಖ್ಯವಾದ ವಿಷಯವಾಗಿದೆ. ದೇವಾಲಯಗಳು ಇತಿಹಾಸ ರಚನೆ ಮಾಡುವುದಕ್ಕೆ ಬಹುಮುಖ್ಯವಾದತಂಹ ಆಧಾರಗಳಾಗಿವೆ. ಇವು ಮಾನವನ ಜೀವನ ಚರಿತ್ರೆ ಮತ್ತು ಅವನ ಕಾಲದ ಸಂಸ್ಕೃತಿಯನ್ನು ತಿಳಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ದೇವಾಲಯಗಳು ಮಾನವನ ಧಾರ್ಮಿಕ ಶ್ರದ್ಧೆ, ಭಕ್ತಿ ಮತ್ತು ನಂಬಿಕೆಗಳ ಪ್ರತೀಕಗಳಾಗಿ ಬೆಳೆದುಬಂದಿದೆ.

ಮಾನವ ಮೊದಲ ನಿಸರ್ಗದಲ್ಲಿ ವಾಸ ಮಾಡುತ್ತಿದ್ದರಿಂದ ಪ್ರಕೃತಿ ವಿಸ್ಮಯಗಳಿಂದ ಮಳೆ, ಗುಡುಗು, ಸಿಡಿಲು, ಕಾಡ್ಗಿಚ್ಚು ಮೊದಲಾದವುಗಳು ಅವನಲ್ಲಿ ಭೀತಿ ಮತ್ತು ಸಂಶಯವನ್ನು ಮೂಡಿಸಿದ್ದರಿಂದ ನಿಸರ್ಗದಲ್ಲಿ ಎಲ್ಲಕ್ಕಿಂತ ಮಿಗಿಲಾದ ಅದ್ಭುತ ಶಕ್ತಿ ಇದೆ ಎಂಬುದನ್ನು ಅರಿತುಕೊಂಡು, ಆ ಶಕ್ತಿಯನ್ನು ದೇವರೆಂದು ನಂಬಿದ್ದರಿಂದ ಮೊದಲು ಪ್ರಕೃತಿಯನ್ನು ಪೂಜೆ ಮಾಡುವುದಕ್ಕೆ ಆರಂಭಿಸಿದನು. ನಂತರ ಆ ಶಕ್ತಿಗೆ ಮೂರ್ತಿ ರೂಪ ನೀಡಿ ಪೂಜಿಸಲು ಆರಂಭಿಸಿದನು. ಅಲ್ಲಿಂದಲೇ ಮೂರ್ತಿ ಪೂಜೆಯ ಆರಂಭವಾಯಿತು.

ಭಾರತದಲ್ಲಿ ಹರಪ್ಪ ಸಂಸ್ಕೃತಿಯಿಂದಲೇ ಮೂರ್ತಿಪೂಜೆಯನ್ನು ಗುರುತಿಸಲು ವಿದ್ವಾಂಸರು ಪ್ರಯತ್ನಪಟ್ಟಿದ್ದಾರೆ. ಕ್ರಿ.ಪೂ. ೩೦೦೦ ವರ್ಷಗಳಷ್ಟು ಹಿಂದಿನ ಮೆಹೆಂಜಾದಾರೋ, ಹರಪ್ಪ ಉತ್ಖನನದಲ್ಲಿ ದೊರೆತ ಪಳಿಯುಳಿಕೆಗಳನ್ನು ಅವು ಶಿವನ ಆರಾಧನೆ ಮತ್ತು ಕುರುಹುಗಳೆಂದು ಊಹಿಸಿರುವ ಇವರು ಪ್ರಾಚೀನ ಭಾರತದಲ್ಲಿ ಮೂರ್ತಿಪೂಜೆಯನ್ನು ಕುರಿತು ದೊರೆತ ದಾಖಲೆಗಳಿಂದ ವಿದ್ವಾಂಸರು ಚರ್ಚಿಸಿ ಅದರ ಪ್ರಾಚೀನತೆಯನ್ನು ಗುರುತಿಸುವಲ್ಲಿ ಪ್ರಯತ್ನಿಸಿದ್ದಾರೆ.[೧]

ಗಟ್ಟಿಯಾದ ವಸ್ತುವಿನ ವಾಸ್ತುವಿನ(ನಿವೇಶನ) ಮೇಲೆ ರಚನೆಗೊಂಡ ಎಲ್ಲಾ ವಾಸಯೋಗ್ಯ ರಚನೆಗೂ ವಾಸ್ತುರಚನೆ ಎನಿಸಿಕೊಳ್ಳುತ್ತವೆ. ಈ ರೀತಿಯ ವಾಸ್ತುರಚನೆಗಳು ಮಾನವನ

ನಾಗರೀಕತೆಯ ಮಾನದಂಡ ಎಂದರೂ ತಪ್ಪಾಗಲಾರದು. ಕಾಲಾಂತರದಲ್ಲಿ ಮಾನವನ ಬೌದ್ಧಿಕ ವಿಕಸನದ ರೀತಿಯ ವಿಚಿತತೆಯ ಪ್ರತ್ಯಕ್ಷ ಸಾಕ್ಷಿಗಳೆಂದು ಹೇಳಬಹುದು.[೨]

ಮಾನಸಾರ, ಮಯಮತ, ಕಶ್ಯಪ, ವೈಖಾನಸ, ವಿಶ್ವಕರ್ಮೀಯ ಇನ್ನೂ ಮೊದಲಾದ ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ದೇವಾಲಯಗಳ ನಿರ್ಮಾಣ ಕುರಿತು ಅನೇಕ ವಿವರಗಳು ದೊರೆಯುತ್ತವೆ. ವಿಪರ್ಯಾಸವೆಂದರೆ ಈ ಎಲ್ಲಾ ಗ್ರಂಥಗಳು ಪೂರ್ಣಪ್ರಮಾಣದಲ್ಲಿ ದೊರೆಯದೇ ಇಲ್ಲದಿರುವುದರಿಂದ. ದೇವಾಲಯಗಳ ಬಗ್ಗೆ ಇನ್ನೂ ಹೆಚ್ಚಿನ ವಿವರಗಳ ತಿಳಿದುಕೊಳ್ಳಲು ಸಾಧ್ಯವಾಗುತ್ತಿಲ್ಲ.[೩] ಆದರೂ ಮಾನಸಾರ ಗ್ರಂಥವೂ ದೇವಾಲಯಗಳ ನಿರ್ಮಾಣದ ಬಗ್ಗೆ ಹೆಚ್ಚಿನ ವಿವರಗಳನ್ನು ತಿಳಿಸುತ್ತದೆ. ಈ ಗ್ರಂಥವು ಒಟ್ಟು ೫೮ ಅಧ್ಯಾಯಗಳನ್ನು ಹೊಂದಿದ್ದು, ಪ್ರತಿ ಅಧ್ಯಾಯದಲ್ಲೂ ದೇವಾಲಯಗಳ ನಿರ್ಮಾಣದ ಉದ್ದೇಶ, ಶಿಲ್ಪಿಗೆ ಇರಬೇಕಾದ ಅರ್ಹತೆಗಳು, ದೇವಾಲಯ ನಿರ್ಮಾಣ ಯೋಗ್ಯ ಸ್ಥಳ, ದೇವಾಲಯಗಳನ್ನು ಗ್ರಾಮ, ನಗರಗಳ ಯಾವ ಭಾಗದಲ್ಲಿ, ಯಾವ ದಿಕ್ಕಿನಲ್ಲಿ ಕಟ್ಟಬೇಕು. ತಳವಿನ್ಯಾಸ, ಅಧಿಷ್ಠಾನ, ಶಿಖರ, ದೇವರುಗಳ ಪ್ರತಿಷ್ಠಾಪನೆ, ಪರಿವಾರ ದೇವರುಗಳ ಪ್ರತಿಷ್ಠಾಪನೆ ಇನ್ನೂ ಮುಂತಾದ ವಿವರಗಳನ್ನು ತಿಳಿಸುತ್ತದೆ.[೪]

ಆದರೆ ದೇವಾಲಯಗಳ ಉಗಮ ಹಾಗೂ ಅದರ ಹುಟ್ಟನ್ನು ಕುರಿತು ಹಲವು ಅಭಿಪ್ರಾಯಗಳಿದ್ದರೂ ಮೂರ್ತಿ ಪೂಜೆ ಪ್ರಾರಂಭವಾದಾಗಲೇ ದೇವಾಲಯಗಳು ಉಗಮ ಆಗಿವೆ ಎಂದು ಹೇಳಬಹುದು. ಮೂರ್ತಿ ಆರಾಧನೆಯು ಆರಂಭವಾದ ಬಳಿಕ ಅದರ ರಕ್ಷಣೆಗಾಗಿ ನಿರ್ಮಿಸಿದಂತಹ ಕಟ್ಟಡಗಳ ನಿರ್ಮಾಣಕ್ಕೆ "ವಾಸ್ತುಶಿಲ್ಪ" ಎಂದು ಕರೆಯಲಾಯಿತು.

ಭಾರತೀಯ ಪರಂಪರೆಯಲ್ಲಿ ದೇವಾಲಯದ ರೂಪಗಳು ದೊರೆಯುವುದು ಬೌದ್ಧ ಮತ್ತು ಜೈನ ಧರ್ಮಗಳು ಅಸ್ತಿತ್ವಕ್ಕೆ ಬಂದ ಬಳಿಕ. ಈ ಧರ್ಮಗಳಿಗಾಗಿ ಸಂಬಂಧಿಸಿದ ಸ್ತೂಪ ಮತ್ತು ಚೈತ್ಯಗಳು ಆರಂಭದ ಧಾರ್ಮಿಕ ಕಟ್ಟಡ ವಾಸ್ತುವಿಗೆ ಸಾಕ್ಷಿಗಳಾಗಿವೆ.[೫] ನಂತರ ಬಂದಂತಹ ಮೌರ್ಯರು, ಶಾತವಾಹನರುಗಳ ಕಾಲದಲ್ಲಿ ಸ್ತೂಪಗಳು ಚೈತ್ಯಗಳು ಹೆಚ್ಚಿನದಾಗಿ ವಿಕಾಸ ಹೊಂದಿ ದೇವಾಲಯಗಳ ರೂಪವನ್ನು ಪಡೆದಿದೆ ಎಂದು ಹೇಳಬಹುದು. ಗುಪ್ತರ ಕಾಲದಲ್ಲಿ ದೇವಾಲಯ ಕಲ್ಪನೆ ಪರಿಪಕ್ವಗೊಂಡಿತು. ಇವರು ದೇಗುಲ ವಾಸ್ತುಶಿಲ್ಪಕ್ಕೆ ವಿಶೇಷ ಪ್ರೋತ್ಸಾಹ ಮತ್ತು ಆದ್ಯತೆ ನೀಡಿದವರಲ್ಲಿ ಪ್ರಮುಖರಾಗಿದ್ದಾರೆ. ಪ್ರಾರಂಭದಲ್ಲಿ ದೇವಾಲಯಗಳನ್ನು ಮರ, ಬೊಂಬು, ಮಣ್ಣು, ಇಟ್ಟಿಗೆಗಳಿಂದ ನಿರ್ಮಿಸುತ್ತಿದ್ದರು. ನಂತರದಲ್ಲಿ ಅವುಗಳ ಬಳಕೆಯ ದೃಷ್ಟಿಯಿಂದ ಶಿಲೆಯನ್ನು ಬಳಸಿ ದೇವಾಲಯ ನಿರ್ಮಿಸಲು ಪ್ರಾರಂಭಿಸಿದರು. ಅಂತಹ ಪ್ರಯೋಗ ಗುಪ್ತರಿಗೆ ಸಲ್ಲುತ್ತದೆ.[೬]

ಕರ್ನಾಟಕದಲ್ಲಿ ಬೆಳೆದು ಬಂದ ದೇವಾಲಯಗಳು ಅದರ ವಾಸ್ತುಶಿಲ್ಪ ಹೇಳುವಂತೆ ಕರ್ನಾಟಕದಲ್ಲಿರುವಷ್ಟು ದೇವಾಲಯಗಳು ಮತ್ತು ವಾಸ್ತುಶಿಲ್ಪದಲ್ಲಿಯೂ ವೈವಿಧ್ಯ ಭಾರತ ದೇಶದ ಯಾವ ರಾಜ್ಯದಲ್ಲಿಯೂ ನೋಡಲಾಗುವುದಿಲ್ಲ. ಕರ್ನಾಟಕದಲ್ಲಿ ನಾಗರ, ವೇಸರ,

ದ್ರಾವಿಡ ಮಾದರಿಯ ದೇವಾಲಯಗಳನ್ನು ಕಾಣುತ್ತೇವೆ. ಕರ್ನಾಟಕದಲ್ಲಿ ಮೌರ್ಯರು, ಶಾತವಾಹನರು ಕರ್ನಾಟಕದಲ್ಲಿ ಮೌರ್ಯರು ಶಾತವಾಹನರ ಕಾಲದ ಸ್ತೂಪಗಳು ಕಂಡುಬಂದರೂ ಸಹ ಕದಂಬರ ಕಾಲದಲ್ಲಿ ದೇವಾಲಯಗಳು, ಕೊರೆದ ಗುಹಾಲಯಗಳು, ಕಟ್ಟಡ ದೇವಾಲಯಗಳು ಹುಟ್ಟಿಕೊಂಡಿವೆ. ನಂತರ ಆಳ್ವಿಕೆ ಮಾಡಿದಂತಹ ಬಾದಾಮಿ ಚಾಲುಕ್ಯರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು ಮತ್ತು ವಿಜಯನಗರ ಕಾಲದಲ್ಲಿ ದೇವಾಲಯಗಳು ಪ್ರೌಢವಸ್ಥೆಯನ್ನು ಕಂಡಿದಲ್ಲದೆ, ಕರ್ನಾಟಕದ ಕೀರ್ತಿಯನ್ನು ಪ್ರಪಂಚವೇ ಗುರುತಿಸುವಂತೆ ಮಾಡಿದೆ. ಈ ರೀತಿಯಾಗಿ ದೇವಾಲಯಗಳು ಹಂತ ಹಂತವಾಗಿ ಬೆಳೆದು ಬಂದವು.[೭]

ಚಳ್ಳಕೆರೆ ಕಸಬಾ ಹೋಬಳಿಯಲ್ಲಿ ಕಂಡುಬರುವ ದೇವಾಲಯಗಳು. ರಾಷ್ಟ್ರಕೂಟರ ಶೈಲಿಯಲ್ಲಿ ನಿರ್ಮಾಣಗೊಂಡಿವೆ. ನೊಳಂಬರ ಕಾಲದ ದೇವಾಲಯಗಳು ಹಾಗೂ ವಿಜಯನಗರ ಅರಸರ ಅಧೀನ ಪಾಳೆಯಗಾರರ ಕಾಲದಲ್ಲಿ ನಿರ್ಮಾಣಗೊಂಡಿವೆ. ಇಲ್ಲಿನ ದೇವಾಲಯಗಳ ಬಗೆಗಿನ ಐತಿಹಾಸಿಕ ವಿವರಗಳನ್ನು ತಿಳಿದುಕೊಳ್ಳಲು ಶಾಸನಗಳು ಅಥವಾ ಆನುಷಂಗಿಕ ಆಕರಗಳು ದೊರಕಿವೆ ಹಾಗೂ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕಸಬಾ ಹೋಬಳಿಯ ದೇವಾಲಯಗಳ ಐತಿಹಾಸಿಕತೆ, ನಿರ್ಮಾಣ ಹಾಗೂ ವಾಸ್ತುಶಿಲ್ಪದ ಕುರಿತ ಮಾಹಿತಿಗಳನ್ನು ಸಂಗ್ರಹಿಸಿಕೊಂಡಿದ್ದು, ಅವುಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ.

## ೪.೧. ಶೈವ ದೇವಾಲಯಗಳು

ಧರ್ಮಗಳಲ್ಲಿಯೇ ಪ್ರಾಚೀನವಾದದು ಮತ್ತು ಭಾರತದಲ್ಲಿ ಹೆಚ್ಚು ವ್ಯಾಪಕಗೊಂಡ ಧರ್ಮವೆಂದರೆ ಅದು ಶೈವಧರ್ಮ(ಪಂಥ)ವಾಗಿದೆ. ಶೈವ ಧರ್ಮದ ಮೂಲ ಮತ್ತು ಅದು ಬೆಳೆದು ಬಂದ ಬಗ್ಗೆ ಇನ್ನೂ ಅಸ್ಪಷ್ಟವಾಗಿದೆ. ಶೈವ ಧರ್ಮಕ್ಕೆ ೨೮ ಆಗಮಗಳಿದ್ದು, ಇವುಗಳನ್ನು ಶೈವಾಗಮಗಳೆಂದು ಕರೆಯಲಾಗಿದೆ. ಶೈವಾಗಮದ ಕರ್ತೃ ಶಿವನಾಗಿದ್ದಾನೆ.

ರಾಷ್ಟ್ರಕೂಟರಿಂದ ಮೈಸೂರು ಒಡೆಯರ ಕಾಲದವರೆಗೆ ಹಲವು ಶಿವ ದೇವಾಲಯಗಳು ಈ ಪರಿಸರದಲ್ಲಿ ರಚನೆಗೊಂಡಿವೆ. ಶೈವರು ಪರಬ್ರಹ್ಮ ವಸ್ತುವನ್ನು ಶಿವ, ರುದ್ರ ಎಂದು ಪೂಜಿಸುತ್ತಾರೆ. ಶ್ರುತಿ ಮತ್ತು ಸ್ಮೃತಿಗಳಲ್ಲಿ ಇದಕ್ಕೆ ಆಧಾರವಿದೆ. ಶೈವ ಮತದಲ್ಲಿ ದ್ವೈತ ಪಾಶುಪತ, ದ್ವೈತ ಶೈವ ಸಿದ್ಧಾಂತ, ದ್ವೈತಾ ದ್ವೈತ ಲಕುಲೀಶ ಪಾಶುಪತ, ವಿಶಿಷ್ಟಾದ್ವೈತ ಶಿವ ಮತ್ತು ವಿಶೇಷ ದ್ವೈತ ಶೈವ(ವೀರಶೈವ), ನಂದಿಕೇಶ್ವರ ಶೈವ, ರಸೇಶ್ವರ ಶೈವ ಮತ್ತು ಕಾಶ್ಮೀರ ಶೈವ ಎಂಬ ೮ ಪ್ರಭೇದಗಳಿವೆ. ಕನ್ನಡ ನಾಡಿನ ರಾಜರು, ಸಾಮಂತ ಮನೆತನದವರು, ಜನಸಾಮಾನ್ಯರು ಶೈವ ಧರ್ಮದ ಪುರಸ್ಕೃತರಾಗಿದ್ದಾರೆ.

ಪ್ರಸ್ತುತ ಚಳ್ಳಕೆರೆ ಕಸಬಾ ಹೋಬಳಿಯಲ್ಲಿ ಕಂಡು ಬರುವಂತಹ ಶೈವ ದೇವಾಲಯಗಳ ರಚನೆ, ವಿನ್ಯಾಸವನ್ನು ವಾಸ್ತುಶೈಲಿಯ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ವಿವರಿಸಲಾಗಿದೆ. ಇವು

ದೇವಾಲಯದ ಶೈಲಿಯನ್ನು ನಿರ್ಧರಿಸಲು ಸಹಾಯಕವಾಗುವುದರೊಂದಿಗೆ ಆ ಅಂಗ ಭಾಗಗಳು ಬೆಳೆದು ಬಂದ ರೀತಿಯನ್ನು ಸೂಚಿಸುತ್ತದೆ.

ಪ್ರಸ್ತುತ ಈ ಅಧ್ಯಾಯದಲ್ಲಿ ಚಳ್ಳಕೆರೆ ಕಸಬಾ ವ್ಯಾಪ್ತಿಯಲ್ಲಿ ಬರುವಂತಹ ದೇವಾಲಯಗಳ ಬಗ್ಗೆ ಸಂಕ್ಷಿಪ್ತ ಅಧ್ಯಯನ ಕೈಗೊಳ್ಳುವ ಮೂಲಕ ದೇವಾಲಯಗಳ ವಾಸ್ತುಶೈಲಿಯನ್ನು ಪರಿಚಯಿಸಲಾಗಿದೆ.

ಚಳ್ಳಕೆರೆ ಕಸಬಾ ಹೋಬಳಿಯಲ್ಲಿ ವಿವಿಧ ರಾಜಮನೆತನಗಳ ಆಳ್ವಿಕೆಯ ಅವಧಿಯಲ್ಲಿ ನಿರ್ಮಾಣಗೊಂಡಿರುವ ಮತ್ತು ಜೀರ್ಣೋದ್ಧಾರವಾಗಿರುವ ದೇವಾಲಯಗಳನ್ನು ಶಾಸನಗಳ ಹಿನ್ನೆಲೆಯಲ್ಲಿ, ವಾಸ್ತುಶೈಲಿಯ ಹಿನ್ನೆಲೆಯಲ್ಲಿ ಸಂಕ್ಷಿಪ್ತವಾಗಿ ಪಟ್ಟಿ ಮಾಡಲಾಗಿದೆ. ಶೈವ ದೇವಾಲಯಗಳು, ವೈಷ್ಣವ ದೇವಾಲಯಗಳು, ಶೈವ ಶಿಲ್ಪಗಳು ಮತ್ತು ವೈಷ್ಣವಶಿಲ್ಪಗಳು ಹಾಗೂ ಶಾಕ್ತ ದೇವಾಲಯಗಳು, ಗ್ರಾಮದೇವತೆಗಳನ್ನು ಈ ಕೆಳಗಿನಂತೆ ವಿಂಗಡಿಸಿಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ.

| | | |
|---|---|---|
| ಗ್ರಾಮ | : | ದೊಡ್ಡೇರಿ |
| ಸ್ಮಾರಕ | : | ವೀರಭದ್ರ ದೇವಾಲಯ |
| ಕಾಲ | : | ೧೭-೧೮ನೆಯ ಶತಮಾನ |
| ಶೈಲಿ | : | ಪಾಳೆಯಗಾರ |
| ಸ್ಥಳ | : | ಗ್ರಾಮದ ಪೂರ್ವಕ್ಕೆ |
| ಅಭಿಮುಖ | : | ಉತ್ತರಾಭಿಮುಖ |
| ಸ್ಥಿತಿ | : | ಉತ್ತಮ |

ಚಳ್ಳಕೆರೆ ತಾಲ್ಲೂಕಿನಿಂದ ಆರು ಕಿ.ಮೀ. ದೂರದಲ್ಲಿರುವ ಗ್ರಾಮವೇ ದೊಡ್ಡೇರಿ. ಚಳ್ಳಕೆರೆಯ ೫೪ನೇ ಶಾಸನದಿಂದ ಕ್ರಿ.ಶ. ೧೫೫೫ ಮತ್ತಮುದ್ರ ಕ್ರಿ.ಶ. ೧೫೬೦ ತಳುಕಿನ ವಿಚಾರದಲ್ಲಿ ಈ ದೊಡ್ಡೇರಿ ಸೀಮೆಯ ಉಲ್ಲೇಖ ಬರುತ್ತದೆ. ಮೊದಲು ಹದಿನಾಲ್ಕು ಸ್ಥಳಗಳು ಒಳಗೊಂಡಂತೆ ಬಂದು ಸೀಮೆಯ ಕೇಂದ್ರ ಸ್ಥಳವಾಗಿತ್ತು ಎಂದು ಇತಿಹಾಸಕಾರರ ಅಭಿಪ್ರಾಯವಾಗಿದೆ.

ಕ್ರಿ.ಶ. ೧೬೯೦-೧೬೯೬ರವರೆಗೆ ಇಲ್ಲಿ ಆಗಾಗ ಕದನಗಳು ನಡೆಯುತ್ತಲೇ ಇದ್ದುದ್ದರಿಂದ ಇತಿಹಾಸದಲ್ಲಿ ದೊಡ್ಡೇರಿ ಕದನವೆಂದು ಇಲ್ಲಿ ಪ್ರಖ್ಯಾತವಾಗಿವೆ. ಮೊಗಲರಿಗೂ ಮರಾಠಿಯವರ ಸಂತಾಜಿ ಘೋರ್ಪಡೆಗೂ ದೊಡ್ಡೇರಿ ನೆಲದಲ್ಲಿ ಭಾರಿ ಕಾಳಗ ನಡೆದಾಗ ಚಿತ್ರದುರ್ಗದ ಬಿಚ್ಚುಗತ್ತಿ ಭರಮಣ್ಣ ನಾಯಕರು ಮರಾಠಿಯವರಿಗೆ ಸಹಾಯ ಮಾಡಿದ್ದರಿಂದ ಮೊಗಲರು ಸೋತು ಮರಾಠಿಯವರಿಗೆ ಜಯವಾಯಿತು.

ಕ್ರಿ.ಶ. ೧೮೮೨ರವರೆಗೂ ದೊಡ್ಡೇರಿಯು ತಾಲ್ಲೂಕು ಸ್ಥಳವಾಗಿತ್ತು. ಈ ಹೋಬಳಿ ಈಗ ಗ್ರಾಮವಾಗಿದೆ. ಕೆಲವು ಚಾರಿತ್ರಿಕ ದೇವಾಲಯಗಳಲ್ಲಿ ಕನ್ನೇಶ್ವರ, ಈಶ್ವರ, ವೀರಭದ್ರ, ರೇವಣಸಿದ್ದೇಶ್ವರ ಮಠ ಹಾಗೂ ಗೋಕರ್ಣೇಶ್ವರ ದೇವಾಲಯಗಳು ಕಂಡು ಬರುತ್ತವೆ. ಈ ದೇವಾಲಯದ ತಳವಿನ್ಯಾಸದಲ್ಲಿ ಗರ್ಭಗೃಹ ಮತ್ತು ಮುಖಮಂಟಪವನ್ನು ಹೊಂದಿದೆ. ಮಧ್ಯದಲ್ಲಿ ಶ್ರೀ ವೀರಭದ್ರೇಶ್ವರ ಮೂರ್ತಿಯನ್ನು ಕಾಣುತ್ತೇವೆ. ಕಂಬಗಳಲ್ಲಿ ಅಲಂಕಾರಿಕ ಕೆತ್ತನೆಗಳನ್ನು ಕಾಣುವುದಿಲ್ಲ. ಈ ದೇಗುಲದಲ್ಲಿ ಮೂರು ಅಡಿ ಎತ್ತರದ ಕಪ್ಪುಶಿಲೆಯ ವೀರಭದ್ರ ಶಿಲ್ಪವಿದೆ. ಕಿರೀಟ ಮುಕುಟುಧಾರಿಯಾದ ವೀರಭದ್ರನು ತನ್ನ ಎರಡು ಕೈಗಳಲ್ಲಿ ಕತ್ತಿ ಮತ್ತು ಗುರಾಣಿ ಹಿಡಿದಿರುವನು. ಸಭಾಮಂಟಪವನ್ನು ಎರಡು ನಂದಿ, ಶಿವಲಿಂಗ, ಗಣೇಶ, ಭೈರವಿ ಶಿಲ್ಪಗಳಿವೆ. ಈ ದೇವಾಲಯದ ದ್ವಾರಗಳು ಸರಳವಾಗಿವೆ. ಮರದ ಬಾಗಿಲು ಹಾಗೂ ಹೊಸ್ತಿಲುಗಳನ್ನು ಕಾಣುತ್ತೇವೆ. ಈ ದೇವಾಲಯದ ಒಳಗಡೆ ಜೀರ್ಣೋದ್ಧಾರ ಮಾಡಿದ್ದಾರೆ. ಈ ದೇವಾಲಯದ ಹೊರಗೋಡೆ ಸರಳವಾಗಿದ್ದು, ಶಿಖರವನ್ನು ಕಾಣುವುದಿಲ್ಲ. ಲಿಂಗಾಯಿತರು, ಪೂಜಾರಿಗಳು, ದಸರಾದಲ್ಲಿ ಮುಡಿಯುವ ಉತ್ಸವ ಪ್ರತಿವರ್ಷ ಸಹ ಜರುಗುತ್ತದೆ. ಇದು ಸರಳವಾದ ದೇವಾಲಯವಾಗಿದೆ.

ಗ್ರಾಮ : ದೊಡ್ಡೇರಿ

ಸ್ಮಾರಕ : ಗೋಕರ್ಣೇಶ್ವರ ದೇವಾಲಯ

ಕಾಲ : ಕ್ರಿ.ಶ.ಸು. ೧೦-೧೧ನೇ ಶತಮಾನ

ಶೈಲಿ : ರಾಷ್ಟ್ರಕೂಟ

ಸ್ಥಳ : ಗ್ರಾಮದ ದಕ್ಷಿಣಕ್ಕೆ

ಅಭಿಮುಖ : ಪೂರ್ವಾಭಿಮುಖ

ಸ್ಥಿತಿ : ಉತ್ತಮ

ಈ ದೇವಾಲಯವು ದೊಡ್ಡೇರಿಯ ದಕ್ಷಿಣ ದಿಕ್ಕಿಗೆ ಗೋಕರ್ಣೇಶ್ವರ ದೇವಾಲಯ ಸಹ ಕಂಡು ಬರುತ್ತದೆ. ಈ ದೇವಾಲಯದ ಶೈಲಿಯನ್ನು ಗಮನಿಸಿದರೆ ರಾಷ್ಟ್ರಕೂಟರ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಾಣಗೊಂಡಿರುವ ಗೋಕರ್ಣೇಶ್ವರ ದೇವಾಲಯ ತಲವಿನ್ಯಾಸದಲ್ಲಿ ಗರ್ಭಗೃಹ, ಸಭಾಮಂಟಪ ಸಹ ಒಳಗೊಂಡಿದೆ. ಗರ್ಭಗೃಹದಲ್ಲಿ ಕಪ್ಪು ಶಿಲೆಯ ನಯವಾದ ಬೃಹತ್ ಗಾತ್ರದ ಸುಮಾರು ನಾಲ್ಕೂವರೆ ಅಡಿ ಎತ್ತರದ ಪ್ರತಿಷ್ಠಾಪನೆ ಶಿವಲಿಂಗವಿದೆ. ಸಭಾಮಂಟಪದಲ್ಲಿ ಇತ್ತೀಚೆಗೆ ನಂದಿಯನ್ನು ಸಹ ಪ್ರತಿಷ್ಠಾಪಿಸಿರುವರು. ದೇವಸ್ಥಾನದ ಸಭಾಮಂಟಪದಲ್ಲಿ ಎರಡು ರಾಷ್ಟ್ರಕೂಟ ಕಾಲದ ಕಂಬಗಳು ಸಹ ಕಾಣಬಹುದಾಗಿದೆ. ಈ ದೇವಾಲಯದ ಆವರಣದಲ್ಲಿ ಒಂದೂವರೆ ಅಡಿ ಎತ್ತರದ ಸೂರ್ಯನ ಶಿಲ್ಪವಿದೆ. ಸೂರ್ಯ ಕೈಗಳಲ್ಲಿ ಪದ್ಮಗಳಿವೆ. ಇವುಗಳಲ್ಲದೆ ದೇವಸ್ಥಾನದ ಮುಂಭಾಗದಲ್ಲಿ ಯತಿ, ನಂದಿ, ಗಣೇಶ, ಶಿವ, ಕತ್ತಿ, ಗುರಾಣಿ ಹಿಡಿದ ವೀರಗಳು ಹಾಗೂ ನಿಂಬೆಹಣ್ಣು ಮತ್ತು ಕನ್ನಡಿ ಹಿಡಿದ

ಮಹಿಳೆಯ ವೀರಮಾಸ್ತಿಕಲ್ಲುಗಳು ಸಹ ಕಂಡುಬರುತ್ತದೆ. ದೇವಸ್ಥಾನ ಮುಂಭಾಗದಲ್ಲಿ ಎರಡು ನಂದಿಯ ಶಿಲ್ಪಗಳೂ ಸಹ ಕಂಡುಬರುತ್ತದೆ. ಈ ದೇಗುಲದ ಶಿಲ್ಪಗಳು ಪ್ರಾಚೀನ ಕಾಲದವಾಗಿದೆ. ಈ ಗೋಕರ್ಣೇಶ್ವರ ದೇವಾಲಯದಲ್ಲಿ ಅಥವಾ ದೇವಾಲಯದ ಮುಂಭಾಗದಲ್ಲಿ ಉತ್ತಮವಾದಂತಹ ಪರಿಸರ ಕೂಡಿರುವುದರಿಂದ ಗೋಕಣೇಶ್ವರ ಮಠದ ವಿದ್ಯಾರ್ಥಿಗಳು ಸಂಜೆ ಸಮಯದಲ್ಲಿ ಗುಂಪು ಗುಂಪುಗಳಾಗಿ ವಿದ್ಯಾಭ್ಯಾಸ ಮಾಡುವುದು ಸಹ ಕಂಡುಬರುತ್ತದೆ. ದಿನನಿತ್ಯವು ಸಹ ದೇವಾಲಯದ ಬಾಗಿಲು ತೆರೆದಿರುತ್ತದೆ ಹಾಗೂ ಪೂಜೆ ಪುನಸ್ಕಾರಗಳು ಸಹ ನಡೆಯುತ್ತದೆ. ಉಪ್ಪಾರ ಜನಾಂಗದವರ ವಂಶ ಪರಂಪರೆಯಾಗಿ ಇದನ್ನೂ ಪೂಜೆಸುತ್ತಾರೆ.

ಗ್ರಾಮ : ದೊಡ್ಡೇರಿ
ಸ್ಮಾರಕ : ಈಶ್ವರ ದೇವಾಲಯ
ಕಾಲ : ಕ್ರಿ.ಶ.ಸು. ೧೭-೧೮ನೇ ಶತಮಾನ
ಶೈಲಿ : ಪಾಳೆಯಗಾರ
ಸ್ಥಳ : ದೊಡ್ಡೇರಿ ಗ್ರಾಮದ ಮಧ್ಯ
ಅಭಿಮುಖ : ಪೂರ್ವಾಭಿಮುಖ
ಸ್ಥಿತಿ : ಉತ್ತಮ

ದೊಡ್ಡೇರಿ ಗ್ರಾಮದ ಮಧ್ಯದಲ್ಲಿ ಕಂಡುಬರುವ ಈಶ್ವರ ದೇವಾಲಯವು ಪಾಳೆಯಗಾರರ ಕಾಲದಲ್ಲಿ ನಿರ್ಮಾಣಗೊಂಡಿರುವುದು ಕಂಡುಬರುತ್ತದೆ. ಪಾಳೆಯಗಾರರ ಶೈಲಿಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಾಣಗೊಂಡಿರುವ ಈಶ್ವರ ದೇವಾಲಯು ತಳವಿನ್ಯಾಸದಲ್ಲಿ ಗರ್ಭಗೃಹ, ಸಭಾಮಂಟಪ ಸಹ ಒಳಗೊಂಡಿದೆ. ಗರ್ಭಗೃಹದಲ್ಲಿ ಎರಡೂವರೆ ಅಡಿ ಎತ್ತರದ ಶಿವಲಿಂಗವಿದೆ. ಶಿವಲಿಂಗದ ಪಕ್ಕದಲ್ಲಿ ಗಣೇಶ, ಭೈರವ, ಶಿಲ್ಪಗಳು ಕಂಡು ಬರುತ್ತವೆ. ಸಭಾಮಂಟಪದಲ್ಲಿ ಕಪ್ಪುಕಲ್ಲಿನ ಕಡೆಯಲಾದ ನಂದಿಶಿಲ್ಪವು ಸಹ ಕಾಣಬಹುದಾಗಿದೆ. ಶಿವರಾತ್ರಿಯ ಸಂದರ್ಭದಲ್ಲಿ ವಿಶೇಷವಾಗಿ ಪೂಜೆ ಪುನಸ್ಕಾರಗಳು ಸಹ ನಡೆಯುವುದು ಕಂಡು ಬರುತ್ತದೆ. ದಿನನಿತ್ಯವೂ ಶಿವನಲ್ಲಿ ಜನರು ಮೊರೆ ಹೋಗಿದ್ದಾರೆ.[೭]

ಗ್ರಾಮ : ದೊಡ್ಡೇರಿ
ಸ್ಮಾರಕ : ರೇವಣ ಸಿದ್ಧೇಶ್ವರ ಮಠ
ಕಾಲ : ಕ್ರಿ.ಶ.ಸು. ೧೭-೧೮ನೇ ಶತಮಾನ
ಶೈಲಿ : ಸ್ಥಳೀಯ
ಸ್ಥಳ : ಗ್ರಾಮದ ಮಧ್ಯ
ಅಭಿಮುಖ : ಉತ್ತರಾಭಿಮುಖ
ಸ್ಥಿತಿ : ಉತ್ತಮ

ಕರ್ನಾಟಕದ ರೇವಣ ಸಿದ್ಧೇಶ್ವರ ಮಠಗಳ ಪೈಕಿ ಇದು ಬಹಳ ಪುರಾತನ ಕಾಲದ ದೇವಸ್ಥಾನಗಳಲ್ಲಿ ಒಂದಾದ ಈ ಮಂದಿರ ಸುಮಾರು ೩೦೦ ವರ್ಷಗಳ ಹಿಂದಿನದು ಎಂದು ಹೇಳಬಹುದು. ಹಾಲುಮತದ ಜನಾಂಗದವರು ಈ ಮಂದಿರಕ್ಕೆ ನಡೆದುಕೊಳ್ಳುತ್ತಾರೆ. ಈ ದೇವರಿಗೆ ೩೨ ಗ್ರಾಮಕ್ಕೆ ಸೇರಿದ ಜನರು ಈ ರೇವಣ ಸಿದ್ಧೇಶ್ವರನಿಗೆ ನಡೆದುಕೊಳ್ಳುತ್ತಾರೆ.

ಇದು ಗರ್ಭಗೃಹ,' ಅಂತರಾಳ, ಸಭಾಮಂಟಪ, ತೆರೆದ ಮಂಟಗಳಿಂದ ಕೂಡಿದೆ. ಗರ್ಭಗೃಹದಲ್ಲಿ ತೂಗುಮಂಚ ಹಾಗೂ ಗದ್ದುಗೆಗಳಿವೆ. ತೂಗು ಮಂಟಪದಲ್ಲಿ ರೇವಣಸಿದ್ಧೇಶ್ವರ ಬಳ್ಳಿಯ ಮುಖವಾಡವಿದೆ. ಮೀಸೆ, ಕಣ್ಣು, ವಿಭೂತಿ ಪಟ್ಟಿಯನ್ನು ಮುಖದಲ್ಲಿ ಚಿತ್ರಿಸಲಾಗಿದೆ. ಮೇಲೆ ಕೆಂಪು ವಸ್ತ್ರದ ಪೇಟವಿದೆ. ಮಂಚದಲ್ಲಿ ಸ್ವಾಮಿಯ ಹಿತ್ತಾಳೆಯ ಪಾದುಕೆಗಳಿವೆ, ಸಣ್ಣ ಹಂಸ, ಆನೆ, ತ್ರಿಶೂಲ, ನಂದಿ ಮತ್ತು ಶಿವಲಿಂಗಗಳಿವೆ. ತೂಗು ಮಂಚದ ಮುಂದೆ ಗದ್ದುಗೆಯಿದೆ. ಗದ್ದುಗೆ ಮುಕ್ಕಾಲು ಅಡಿ ಎತ್ತರದ, ಈ ಗದ್ದುಗೆಯಲ್ಲಿ ಕುದುರೆ ಮೇಲೆ ಸವಾರಿ ಮಾಡುವ ರೇವಣ್ಣ ಸಿದ್ಧೇಶ್ವರ. ನಂದಿ, ಸರ್ಪ, ಗಣೇಶ, ಶಿವಲಿಂಗ ರಸ ಶಂಖ, ಪಾದುಕೆ(ಮರ)ಗಳಿವೆ. ಗರ್ಭಗೃಹವು ಅರ್ಧಮಂಟಪದಂತಿದೆ.

ಅಂತಾರಾಳದ ದ್ವಾರಬಾಗಿಲು ಕಟ್ಟಿಗೆಯದು. ಇದನ್ನು ಪದ್ಮ, ಹೂಬಳ್ಳಿಗಳಿಂದ ಅಲಂಕರಿಸಲಾಗಿದೆ. ಲಲಾಟದಲ್ಲಿ ನಂದಿ ಮತ್ತು ಶಿವಲಿಂಗವಿದೆ. ಮೇಲೆ ಮುಂಚಾಚಿದ ಪಟ್ಟಿಕೆಯಿದೆ. ಸಭಾಮಂಟಪದ ಮರದ ಕಂಬಗಳು ಚಚ್ಚೌಕ ಹಾಗೂ ಅಷ್ಟಮುಖ ಆಕಾರದ ದಿಂಡುಗಳನ್ನು ಹೊಂದಿದೆ.

ಈ ಮಠದ ವಿಶೇಷ ಉತ್ಸವಗಳಲ್ಲಿ ದಸರಾದಲ್ಲಿ ಬನ್ನಿ ಮುಡಿಯುವ ಸಂದರ್ಭದಲ್ಲಿ ಊರಿನ ಇತರೆ ದೇವತೆಗಳೊಂದಿಗೆ ಮೆರವಣಿಗೆ ಮಾಡುವ ಸಂಪ್ರಾದಾಯವಿದೆ. ಇದರ ಜೊತೆಗೆ ಮೈಲಾರಿಂಗೇಶ್ವರ, ಬಸವಣ್ಣ, ಈಶ್ವರ, ಆಂಜನೇಯ ದೇವರುಗಳನ್ನು ಕೂಡ ಬನ್ನಿ ಮುಡಿಯಲು ಒಟ್ಟಿಗೆ ಕರೆದೊಯ್ಯುತ್ತಾರೆ. ಕುರುಬ ಸಮುದಾಯದ ಗುರು ಪರಂಪರೆಯವರಾದ ಇವರು ಲಿಂಗಾಧಾರಣೆ ಮಾಡುತ್ತಾರೆ. ಗರ್ಭಗೃಹದ ಮೇಲೆ ಪಿರಮಿಡ್ ಆಕಾರದ ಶಿಖರವಿದ್ದು, ಶಿಖರವು ವೃತ್ತಾಕಾರವಾಗಿದೆ. ಮೇಲೆ ಲೋಹದ ಕಳಸವಿದೆ.

ಗ್ರಾಮ : ದೊಡ್ಡೇರಿ

ಸ್ಮಾರಕ : ಬಸವ ದೇವಾಲಯ

ಕಾಲ : ಕ್ರಿ.ಶ.ಸು. ೧೮ನೇ ಶತಮಾನ

ಶೈಲಿ : ಸ್ಥಳೀಯ

ಸ್ಥಳ : ಗ್ರಾಮದ ಒಳಗೆ

ಅಭಿಮುಖ : ಪೂರ್ವಾಭಿಮುಖ

ಸ್ಥಿತಿ : ಉತ್ತಮ

ದೊಡ್ಡೇರಿಯಲ್ಲಿರುವ ಪ್ರಮುಖವಾದಂತಹ ದೇವಾಲಯಗಳಲ್ಲಿ ಇದು ಸಹ ಒಂದು. ಈ ದೇವಾಲಯದಲ್ಲಿ ತಳವಿನ್ಯಾಸದಲ್ಲಿ ಗರ್ಭಗೃಹ ಮತ್ತು ಮುಖಮಂಟಪವನ್ನು ಸಹ ಹೊಂದಿದೆ. ಗರ್ಭಗೃಹದ ಮಧ್ಯದಲ್ಲಿ ನಂದಿಶಿಲ್ಪವನ್ನು ಕಾಣುತ್ತೇವೆ. ಮತ್ತೆ ಯಾವುದೇ ರೀತಿಯ ಕಂಬಗಳು ಕಾಣುವುದಿಲ್ಲ. ಸರಳವಾದ ಮತ್ತು ನಿರಾಲಂಕೃತವಾಗಿದೆ. ಮುಖಮಂಟಪ ಸರಳವಾದಂತಹ ದೇವಾಲಯವಾಗಿದೆ. ಎಂಟು ಅರೆಕಂಬಗಳನ್ನು ಕಾಣುತ್ತೇವೆ. ಕಂಬಗಳು ಸರಳವಾಗಿರುವಂತಹವುಗಳಾಗಿವೆ.

ದ್ವಾರಬಾಗಿಲು ಸರಳವಾಗಿದೆ. ಹಾಗೂ ಗ್ರಾಮದ ಬಸವಣ್ಣ ದೇವಾಲಯದ ಮುಂಭಾಗದಲ್ಲಿ ಬನ್ನಿಕಟ್ಟೆಯ ಬಳಿ ಸುಖಾಸನದಲ್ಲಿ ಕುಳಿತು ಅಂಕುಶ, ಪಾಶ, ಲೇಖಿನ ಮತ್ತು ಮೋದಕಗಳನ್ನು ಹಿಡಿದು ಗಣೇಶ ಶಿಲ್ಪವಿದೆ. ಇದರ ಪಕ್ಕದಲ್ಲಿ ಮೂರು ವೀರಗಲ್ಲುಗಳಿವೆ. ಇವುಗಳನ್ನು ಮೊದಲನೆಯದು ವೀರಮಾಸ್ತಿಕಲ್ಲು. ಇದರಲ್ಲಿ ಕನ್ನಡಿ ಹಿಡಿದ ಮಹಿಳೆ, ಬರ್ಚಿ ಖಡ್ಗಗಳನ್ನು ಹಿಡಿದ ವೀರರ ಉಬ್ಬು ಶಿಲ್ಪಗಳಿವೆ. ಎರಡನೆಯದರಲ್ಲಿ ವೀರಗಲ್ಲುನಲ್ಲಿ ಕತ್ತಿ, ಗುರಾಣಿ ಹಿಡಿದ ವೀರನಿದ್ದಾನೆ. ಮೂರನೆಯದರಲ್ಲಿ ಖಡ್ಗ, ಚಾಕು ಹಿಡಿದ ವೀರ ಮತ್ತು ಅವನ ಮಡದಿಯ ಶಿಲ್ಪಗಳಿವೆ.

ಗ್ರಾಮ : ನಗರಂಗೆರೆ ಕಾಲ : ಕ್ರಿ.ಶ. ೧೭-೧೮ನೇ ಶತಮಾನ

ಸ್ಮಾರಕ : ಕೋಡಿಮಲ್ಲೇಶ್ವರ ಶೈಲಿ : ಪಾಳೆಯಗಾರ

ಸ್ಥಳ : ಗ್ರಾಮದ ಈಶಾನ್ಯಕ್ಕೆ ಸ್ಥಿತಿ : ಉತ್ತಮ

ಅಭಿಮುಖ : ಪೂರ್ವ

ಚಳ್ಳಕೆರೆ ತಾಲ್ಲೂಕಿನಿಂದ ೩ ಕಿ.ಮೀ. ದೂರದಲ್ಲಿದೆ. ಈ ನಗರಂಗೆರೆಯು ಪ್ರಾಚೀನವಾದ ದೇವಾಲಯವನ್ನು ಒಳಗೊಂಡಿದೆ ನಗರಂಗೆಯ ಈಶಾನ್ಯ ದಿಕ್ಕಿಗೆ ಪಾಳೆಯಗಾರರ ಶೈಲಿಯಲ್ಲಿ ಕ್ರಿ.ಶ ೧೭-೧೮ನೇ ಶತಮಾನದ ಕೋಡಿಮಲ್ಲೇಶ್ವರ ದೇವಾಲಯ ಕಂಡುಬರುತ್ತದೆ. ಈ ದೇವಾಲಯವೂ ಪೂರ್ವಾಭಿಮುಖವಾಗಿದ್ದು, ಈ ದೇವಾಲಯದಲ್ಲಿ ಗರ್ಭಗೃಹ, ಅಂತರಾಳ, ಸಭಾಮಂಟಪಗಳಿಂದ ಕೂಡಿದ ದೇವಾಲಯವಿದು. ಗರ್ಭಗೃಹದಲ್ಲಿ ಎರಡು ಅಡಿ ಎತ್ತರದ ಪ್ರಾಣಿಪೀಠದ ಮೇಲೆ ಒಂದು ಅಡಿ ಎತ್ತರದ ನಯಗೊಳಿಸಿದ ಶಿವಲಿಂಗವನ್ನು ಪ್ರತಿಷ್ಠಾಪಿಸಿರುವರು. ಅಂತರಾಳದಲ್ಲಿ ಒಂದು ಅಡಿ ಎತ್ತರದ ನಂದಿಯ ಶಿಲ್ಪವಿದೆ. ಗರ್ಭಗೃಹದ ಬಾಗಿಲುವಾಡದಲ್ಲಿ ಶೈವ ದ್ವಾರಪಾಲಕ ಶಿಲ್ಪಗಳಿವೆ. ದ್ವಾರಪಾಲಕರು ಡಮರು, ತ್ರಿಶೂಲ, ಗದೆ ಹಾಗೂ ಅಭಯ ಹಸ್ತಮುದ್ರೆಗಳಲ್ಲಿ ನಿಂತಿರುವರು. ಸಭಾಮಂಟಪದಲ್ಲಿ ನಾಲ್ಕು ಚಚ್ಚೌಕ ಕಂಬಗಳಿವೆ. ಗರ್ಭಗೃಹದ ಮೇಲೆ ದ್ವಿತಲವುಳ್ಳ ಶಿಖರವನ್ನು ಗಾರೆಗಚ್ಚಿನಲ್ಲಿ ಮಾಡಿದ್ದಾರೆ. ಶಿಖರದಲ್ಲಿ ನಂದಿ, ಸಿಂಹ ಮುಖಗಳ ಚಿತ್ರಗಳಿವೆ. ದೇಗುಲದ ಮುಂಭಾಗದಲ್ಲಿ ದೀಪಸ್ತಂಭವಿದ್ದು, ಇದರ ಕೆಳ ಭಾಗದಲ್ಲಿ ಕೈಮುಗಿದು ನಿಂತ ಭಕ್ತ ದಂಪತಿಗಳ ಶಿಲ್ಪಗಳನ್ನು ಕೆತ್ತಿರುವರು. ಇವರು ಈ ದೇವಾಲಯವನ್ನು ಕಟ್ಟಿಸಿದವರಿರುವ ಸಾಧ್ಯತೆಯಿದೆ. ಇವರ ಬಳಿ ನಂದಿ

ಶಿಲ್ಪವಿದೆ.[7] ಈ ದೇವಾಲಯದ ಮುಂಭಾಗದಲ್ಲಿ ವೀರಸಿದ್ದಪ್ಪನವರ ಸಮಾಧಿಯೂ ಸಹ ಕಾಣಬಹುದಗಿದೆ. ಈ ಸಮಾಧಿಗೆ ಸಹ ಪೂಜೆ-ಪುನಸ್ಕಾರಗಳು ಸಹ ನಡೆಯುತ್ತವೆ. ಈ ದೇವಾಲಯದ ಉತ್ಸವಾಚರಣೆಗಳು ಶಿವರಾತ್ರಿಯಲ್ಲಿ ವಿಶೇಷವಾಗಿ ಭಜನೆ, ಅನ್ನ ದಾಸೋಹ ಕಾರ್ಯಕ್ರಮಗಳು ಹಾಗೂ ಯುಗಾದಿ, ದಸರಾ ಕಾರ್ತಿಕ ಸಂದರ್ಭದಲ್ಲಿ ದೇವಾಲಯದಲ್ಲಿ ಕಾರ್ಯಕ್ರಮಗಳು ಸಹ ನಡೆಯುತ್ತವೆ. ವಾರದ ಪ್ರತಿ ಸೋಮವಾರದಲ್ಲಿ ವಿಶೇಷ ಪೂಜೆ ನಡೆಯುತ್ತದೆ. ನಗರಂಗೆರೆ ಶಾಲೆಯ ಮುಂಭಾಗದಲ್ಲಿ ವೀರಗಲ್ಲು ಇರುವುದು ಸಹ ಕಂಡುಬರುತ್ತದೆ.

ಗ್ರಾಮ : ಹೆಗ್ಗೆರೆ — ಕಾಲ : ಕ್ರಿ.ಶ.ಸು. ೧೯ನೇ ಶತಮಾನ

ಸ್ಮಾರಕ : ಈಶ್ವರ — ಶೈಲಿ : ಸ್ಥಳೀಯ

ಸ್ಥಳ : ಗ್ರಾಮದ ಮಧ್ಯ — ಸ್ಥಿತಿ : ಉತ್ತಮ

ಅಭಿಮುಖ : ಪೂರ್ವಾಭಿಮುಖ

ಚಳ್ಳಕೆರೆಯಿಂದ ೧೬ ಕಿಲೋಮೀಟರ್ ದೂರದಲ್ಲಿರುವ ಹೆಗ್ಗೇರೆಯಲ್ಲಿ ೨೦ನೇ ಶತಮಾನದ ಈಶ್ವರ ದೇವಾಲಯ ಕಂಡುಬರುತ್ತದೆ. ಈ ದೇವಾಲಯವು ಊರಿನ ಮಧ್ಯಭಾಗದಲ್ಲಿದ್ದು, ದೇವಾಲಯವು ಗರ್ಭಗೃಹ, ನವರಂಗ, ಸಭಾಮಂಟಪ ಹೊಂದಿದೆ. ಗರ್ಭಗೃಹ ಮುಂಭಾಗದಲ್ಲಿ ಯಾವುದೇ ರೀತಿಯ ಕಂಬಗಳು ಕಂಡುಬರುವುದಿಲ್ಲ. ಆದರೆ ಗರ್ಭಗೃಹದಲ್ಲಿ ಈಶ್ವರನ ಶಿಲ್ಪ, ತ್ರಿಶೂಲ, ಡಮರು, ನಂದಿಯನ್ನು ಕಾಣಬಹುದಾಗಿದೆ. ಈ ದೇವಾಲಯದ ದ್ವಾರಬಾಗಿಲಿನಲ್ಲಿ ತ್ರಾಮದ ಹೊದಿಕೆಯನ್ನು ಮುಖಾಂತರ ಹೊದಿಸಲಾಗಿದೆ. ಸಭಾಮಂಟಪದಲ್ಲಿ ಎರಡು ಕಂಬಗಳನ್ನು ಕಾಣಬಹುದು. ಈ ಕಂಬದಲ್ಲಿ ಯಾವುದೇ ರೀತಿಯ ಅಲಂಕಾರ ಕಾಣುವುದಿಲ್ಲ. ಈ ಸಭಾಮಂಟಪದಲ್ಲಿ ಚಿಕ್ಕದೊಂದು ದೀಪಸ್ತಂಭ ಕಾಣಬಹುದಾಗಿದೆ. ದೇವಾಲಯದ ಮುಂಭಾಗದಲ್ಲಿ ೧೫ ಅಡಿ ಎತ್ತರದ ದೀಪಸ್ತಂಭ ಸಹ ಕಂಡುಬರುತ್ತದೆ. ದೇವಾಲಯವು ಶಿಖರವನ್ನು ಸಹ ಹೊಂದಿದೆ. ಈ ದೇವಾಲಯವು ಜೀರ್ಣೋದ್ಧಾರಗೊಂಡಿದೆ ಎಂಬುದು ತಿಳಿಯುತ್ತದೆ.

ಗ್ರಾಮ : ಗಂಜಿಗುಂಟೆ — ಕಾಲ : ಕ್ರಿ.ಶ.ಸು. ೧೯ನೇ ಶತಮಾನ

ಸ್ಮಾರಕ : ಈಶ್ವರ ದೇವಾಲಯ — ಶೈಲಿ : ನೊಳಂಬ ಪಲ್ಲವ

ಸ್ಥಳ : ಮಧುರೆ ಹಳ್ಳದ ಎಡದಂಡೆ — ಸ್ಥಿತಿ : ಉತ್ತಮ

ಅಭಿಮುಖ : ಪೂರ್ವಾಭಿಮುಖ

ಈ ದೇವಾಲಯವು ಚಳ್ಳಕೆರೆಯಿಂದ ೮ ಕಿಲೋಮೀಟರ್ ಗಂಜಿಗುಂಟೆಯೂ ೧೯ನೇ ಶತಮಾನದ ನೊಳಂಬ ಮತ್ತು ಪಲ್ಲವರ ಶೈಲಿಯಲ್ಲಿ ಈಶ್ವರ ದೇವಾಲಯವನ್ನು ಕಾಣಬಹುದಾಗಿದೆ. ಈ ದೇವಾಲಯವು ಗಂಜಿಗುಂಟೆ ಮಧುರೆ ಹಳ್ಳದಲ್ಲಿ ಅಥವಾ ಗಂಜಿಗುಂಟೆಯ ಪಶ್ಚಿಮ ದಿಕ್ಕಿನಲ್ಲಿ ಪೂರ್ವಾಭಿಮುಖವಾಗಿರುವ ಈಶ್ವರ ದೇವಾಲಯವು

ಗರ್ಭಗೃಹ, ಸಭಾಮಂಟಪದಿಂದ ಕೂಡಿದ್ದು, ದೇವಾಲಯ ಗರ್ಭಗೃಹದಲ್ಲಿ ಶಿವಲಿಂಗ ಮತ್ತು ನಂದಿಗಳನ್ನು ಪ್ರತಿಷ್ಠಾಪಿಸಿರುವುದು ಹಾಗೂ ತ್ರಿಶೂಲ ಚಿಕ್ಕದೊಂದು ದೀಪಸ್ತಂಭ ಸಹ ಕಾಣಬಹುದಾಗಿದೆ. ಈ ದೇವಾಲಯವು ಸಹಜವಾಗಿ ಕಂಡುಬರುತ್ತದೆ. ಸಭಾಮಂಟಪದಲ್ಲಿ ನಾಲ್ಕು ಕಂಬಗಳಿದ್ದು, ಈ ಕಂಬಗಳನ್ನು ಚಚ್ಚೌಕ ಮತ್ತು ಅಷ್ಟ ಮುಖಗಳಲ್ಲಿ ಕಡೆಯಲಾಗಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ದ್ರಾವಿಡ ಮಾದರಿಯ ಶಿಖರವಿದೆ.[೧೦] ಈ ದೇವಾಲಯದ ಉತ್ಸಾವಾಚರಣೆಗಳು ಕಾರ್ತಿಕ, ದಸರಾ, ಯುಗಾದಿ ಹಬ್ಬಗಳ ಸಮಯದಲ್ಲಿ ನಡೆಯುತ್ತವೆ. ಶಿವರಾತ್ರಿಯಲ್ಲಿ ವಿಶೇಷ ಪೂಜೆ ಇಂತಹ ಸಂದರ್ಭದಲ್ಲಿ ಭಜನೆ, ಪೂಜಾ ಕಾರ್ಯಗಳು ಸಹ ನಡೆಯುತ್ತವೆ.

| | |
|---|---|
| ಗ್ರಾಮ : ಚಿಕ್ಕ ಮಧುರೆ | ಕಾಲ : ಕ್ರಿ.ಶ.ಸು. ೯ನೇ ಶತಮಾನ |
| ಸ್ಮಾರಕ : ಮಲ್ಲೇಶ್ವರ ದೇವಾಲಯ | ಶೈಲಿ : ರಾಷ್ಟ್ರಕೂಟ |
| ಸ್ಥಳ : ಗ್ರಾಮದ ಪಶ್ಚಿಮಕ್ಕೆ | ಸ್ಥಿತಿ : ಉತ್ತಮ |
| ಅಭಿಮುಖ : ಪೂರ್ವಾಭಿಮುಖ | |

ಚಳ್ಳಕೆರೆಯಿಂದ ೧೭ ಕಿಲೋಮೀಟರ್ ದೂರದಲ್ಲಿರುವ ಚಿಕ್ಕ ಮಧುರೆಯು ೯ನೇ ಶತಮಾನದ ಪ್ರಾಚೀನ ದೇವಾಲಯ ಮಲ್ಲೇಶ್ವರ ದೇವಾಲಯವು ಪೂರ್ವಾಭಿಮುಖವಾಗಿರುವುದು ಕಂಡುಬರುತ್ತದೆ. ಈ ಮಲ್ಲೇಶ್ವರ ದೇವಾಲಯವು ಗರ್ಭಗೃಹ ಮತ್ತು ತೆರೆದ ವಿಶಾಲ ಸಭಾಮಂಟಪಗಳಿರುವ ದೇವಾಲಯವಿದು. ದೇವಾಲಯವನ್ನು ಸಂಪೂರ್ಣವಾಗಿ ಜೀರ್ಣೋದ್ಧಾರಗೊಳಿಸಲಾಗಿದೆ. ಆದರೆ ಗರ್ಭಗೃಹದಲ್ಲಿರುವ ಶಿವಲಿಂಗ ನೊಳಂಬ ಕಾಲದ ಪ್ರಾಚೀನ ಪ್ರತಿಷ್ಠಾಪನಾ ಶಿವಲಿಂಗವಾಗಿದೆ. ಸುಮಾರು ಐದು ಅಡಿ ಉದ್ದ, ನಾಲ್ಕು ಅಡಿಗಳಷ್ಟು ಅಗಲವಾದ ಪಾನವಟ್ಟದಲ್ಲಿ ಒಟ್ಟು ಮೂರು ಅಡಿಗಳೆತ್ತರದ ಕಪ್ಪುಶಿಲೆಯ ನಯವಾದ ಹೊಳಪುಳ್ಳ ಪ್ರತಿಷ್ಠಾಪನಾ ಶಿವಲಿಂಗವಿದು. ಪೀಠದಲ್ಲಿ ಪದ್ಮದ ಅಲಂಕರಣೆಯಿದೆ. ಸಭಾಮಂಟಪದಲ್ಲಿ ನಂದಿಯು ಸುಂದರವಾದ ಶಿಲ್ಪವಿದೆ. ಇದನ್ನು ವಿರೂಪಗೊಳಿಸಿದ ಕಾರಣ ಪುನಃ ಅದೇ ಶಿಲ್ಪವನ್ನು ಪುನಃ ಕಡೆದು ನಂದಿಯ ರೂಪವನ್ನು ನೀಡಲಾಗಿದೆ. ಕಾರ್ತಿಕ ಮಾಸದಲ್ಲಿ ಮಲ್ಲೇಶ್ವರನ ವಿಶೇಷ ಜಾತ್ರಾ ಮಹೋತ್ಸವವು ಜರುಗುತ್ತದೆ. ಶಿವರಾತ್ರಿಯಲ್ಲಿ ಅಭಿಷೇಕ, ಮಹಾನವಮಿ ಮತ್ತು ಶ್ರಾವಣ ಮಾಸಗಳಲ್ಲಿ ಪ್ರತಿನಿತ್ಯ ಪೂಜಿ, ಅಭಿಷೇಕಗಳನ್ನು ಮಾಡಲಾಗಿದೆ. ಗರ್ಭಗೃಹದ ಮೇಲೆ ಇತ್ತೀಚೆಗೆ ಕಟ್ಟಲಾದ ದ್ವಿತಲ ಶಿಖರವಿದೆ. ಇದರಲ್ಲಿ ಶೈವ ಶಿಲ್ಪಗಳನ್ನು ನಿರ್ಮಿಸಲಾಗಿದೆ. ಮಲ್ಲೇಶ್ವರ ದೇವಾಲಯದ ಮುಂಬದಿಯಲ್ಲಿ ಆಂಜನೇಯ ದೇಗುಲವಿದೆ. ಇದಕ್ಕೆ ಗರ್ಭಗೃಹ ಮಾತ್ರವಿದೆ. ಈ ದೇವಾಲಯದ ಆವರಣದಲ್ಲಿರುವ ಶಾಸನಗಳು ರಾಷ್ಟ್ರಕೂಟ ಜಗತ್ತುಂಗ, ಪ್ರಭೂತವರ್ಷ, ಪ್ರತಾಪವಲೋಕ ಎಂಬ ಬಿರುದುಗಳನ್ನು ಹೊಂದಿದ ಮೂರನೆಯ ಗೋವಿಂದನ ಕಾಲದ್ದಾಗಿದೆ. ಈ ಅವಧಿಯಲ್ಲಿ ನೊಳಂಬ-೧೦೦೦ ವನ್ನು ಪಲ್ಲವಾಧಿರಾಜನು ಆಳುತ್ತಿರುವಾಗ ಅವನ ಮಗನಾದ ಪಲ್ಲವಮಲ್ಲನು, ಮದರಿಕಲ್ಲನ್ನು

ನೋಡಿಕೊಳ್ಳುತ್ತಿದ್ದನು. ಅವನ ಹೆಂಡತಿಯಾದ ಗವಗಣಬ್ಬೆಯು ಶಿವಾಲಯವನ್ನು ನಿರ್ಮಿಸಿದಳೆಂದು ಆ ದೇವಾಲಯಕ್ಕೆ ಗವಗಣೇಶ್ವರ ದೇವಾಲಯವೆಂದು ಕರೆಯಲಾಗಿದ್ದು, ಈ ದೇವಾಲಯಕ್ಕೆ ದಾನದತ್ತಿಗಳನ್ನು ನೀಡಿದ ವಿವರನ್ನು ಹೇಳಲಾಗಿದೆ. ಇದರಿಂದ ಗವಗಣಬ್ಬೆಯು ನಿರ್ಮಿಸಿದ ದೇವಾಲಯವೇ ಈಗಿನ ಮಲ್ಲೇಶ್ವರ ದೇವಾಲಯವೆಂದು ಹೇಳಬಹುದು. ಆದರೆ ಪ್ರಾಚೀನ ದೇವಾಲಯದ ರಚನೆಗಳು ಭಗ್ನಗೊಂಡು ಆಧುನಿಕ ದೇವಾಲಯವು ಇಂದು ತಲೆಯೆತ್ತಿ ನಿಂತಿದೆ.

ಮಲ್ಲೇಶ್ವರ ದೇವಾಲಯದ ಆವರಣದಲ್ಲಿ ಅನೇಕ ಪ್ರಾಚೀನ ಮೂರ್ತಿಶಿಲ್ಪ, ಶಿಲಾಶಾಸನ ಹಾಗೂ ದೇವಾಲಯದ ಪ್ರಾಚೀನ ಅವಶೇಷಗಳನ್ನು ಕಾಣಬಹುದು. ಅವುಗಳಲ್ಲಿ ಮಹಿಷಮರ್ಧಿನಿ, ನಂದಿ, ಎರಡು ಕೈಗಳುಳ್ಳ ಅಪರೂಪದ ಗಣೇಶ, ಗಜಲಕ್ಷ್ಮಿ, ಸೂರ್ಯ, ನಂದಿ, ವಿಷ್ಣು, ಷಣ್ಮುಖ ಹಾಗೂ ಸಪ್ತಮಾತೃಕೆಯ ಶಿಲ್ಪ ಫಲಕ ಸಹ ಕಾಣಬಹುದು. (ಬ್ರಾಹ್ಮೀ, ಮಹೇಶ್ವರಿ, ಕುಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಚಾಮುಂಡಿ) ಶಿಲ್ಪಗಳು ಮುಖ್ಯವಾಗಿವೆ. ಇಲ್ಲಿನ ನಾಗರಕಟ್ಟೆಯ ಮೇಲೆ ದೊಡ್ಡದಾದ ನಾಗರ ಹೆಡೆಯುಳ್ಳ ಶಿಲ್ಪವಿದೆ. ಲಿಂಗಾಯತರು ಮಲ್ಲೇಶ್ವರ ದೇವಾಲಯದ ಪೂಜಾ ಕಾರ್ಯಗಳನ್ನು ನಡೆಸಿಕೊಂಡು ಬಂದಿದ್ದಾರೆ.[೨]

| | |
|---|---|
| ಗ್ರಾಮ : ಸೋಮಗುದ್ದು | ಕಾಲ : ಕ್ರಿ.ಶ.ಸು. ೧೮-೧೯ನೇ ಶತಮಾನ |
| ಸ್ಮಾರಕ : ಸೋಮೇಶ್ವರ ದೇವಾಲಯ | ಶೈಲಿ : ಸ್ಥಳೀಯ |
| ಸ್ಥಳ : ಗ್ರಾಮದ ಪೂರ್ವಕ್ಕೆ | ಸ್ಥಿತಿ : ಉತ್ತಮ |
| ಅಭಿಮುಖ : ಪೂರ್ವಾಭಿಮುಖ | |

ಚಳ್ಳಕೆರೆಯಿಂದ ಐದು ಕಿ.ಮೀ. ದೂರದಲ್ಲಿರುವ ಸೋಮಗುದ್ದುವಿನಲ್ಲಿ ಸೋಮೇಶ್ವರ ದೇವಾಲಯ ಕಂಡುಬರುತ್ತದೆ. ಈ ದೇವಾಲಯ ಊರಿನ ಪೂರ್ವಕ್ಕೆ ಹಾಗೂ ಪೂರ್ವಾಭಿಮುಖವಾಗಿರುವ ಈ ದೇವಾಲಯದಲ್ಲಿ ಗರ್ಭಗೃಹ, ಶಿವಲಿಂಗ ಮತ್ತು ಅಂತರಾಳದಲ್ಲಿ ಸಹ ಕಂಡುಬರುತ್ತದೆ. ಅಂತರಾಳದಲ್ಲಿ ನಂದಿಯ ಶಿಲ್ಪಗಳಿವೆ. ಗರ್ಭಗೃಹ ಮತ್ತು ಅಂತರಾಳಗಳ ಬಾಗಿವಾಡಗಳು ಸರಳವಾಗಿದೆ. ಸಭಾಮಂಟಪದಲ್ಲಿ ನಾಲ್ಕು ಕಂಬಗಳಿವೆ. ಇವುಗಳಲ್ಲಿ ಚಚ್ಚೌಕ ಹಾಗೂ ಅಷ್ಟಮುಖಗಳಲ್ಲಿ ಕಡೆದಿರುವರು. ಸಭಾಮಂಟಪದ ಮೇಲಿನ ಕೈಪಿಡಿ ಗೋಡೆಯಲ್ಲಿ ಭಕ್ತ ಮಾರ್ಕಂಡೇಯ ಕಣ್ಣು ಕಪ್ಪು ಶಿವಲಿಂಗಕ್ಕೆ ಅರ್ಪಿಸುತ್ತಿರುವ ಚಿತ್ರಣವಿದೆ. ಗರ್ಭಗೃಹದ ಮೇಲೆ ಸರಸ್ವತಿ, ಪದ್ಮ, ಸಿಂಹ, ನವಿಲುಗಳಿರುವ ಶಿಖರವನ್ನು ನಿರ್ಮಿಸಲಾಗಿದೆ. ಶಿಖರದ ಮೇಲೆ ಲೋಹದ ಕಳಸವಿದೆ. ದೇವಾಲಯದ ಮುಂಭಾಗದ ೧೫ ಅಡಿ ಎತ್ತರದ ದೀಪಸ್ತಂಭ ಸಹ ಕಂಡುಬರುತ್ತದೆ. ಕಾರ್ತಿಕ, ಶಿವರಾತ್ರಿ, ಯುಗಾದಿ, ದಸರಾ ಸಂದರ್ಭದಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಈ ದೇವಾಲಯದ ಮುಂಭಾಗದಲ್ಲಿ ಪ್ರಾಚೀನ ಆಂಜನೇಯ ಮತ್ತು ಚಂದ್ರಗಿರಿಯಮ್ಮನ ಹೊಂಡ ಸಹ ಕಾಣಬಹುದು.

## ೪.೨. ವೈಷ್ಣವ ದೇವಾಲಯಗಳು

ಈ ಪರಿಸರದಲ್ಲಿ ವೈಷ್ಣವ ದೇವಾಲಯಗಳ ಸಂಖ್ಯೆ ತೀರಾ ಕಡಿಮೆ ಇವೆ. ಈ ವ್ಯಾಪ್ತಿಯಲ್ಲಿ ಕ್ರಿ.ಶ.ಸು. ೧೮-೧೯ನೆಯ ಶತಮಾನದ ರಾಣಿಕೆರೆಯ ಎಡಬದಿಯಲ್ಲಿರುವ ಬಯಲು ಆಂಜನೇಯ, ಬೊಂಬೇರಹಳ್ಳಿಯ ಹನುಮಂತ ದೇವಾಲಯ ಹಾಗೂ ತ್ರಿಕೂಟ ದೇವಾಲಯ ಮಾತ್ರ ಕಂಡುಬಂದಿದೆ. ಶೈವಧರ್ಮದಲ್ಲಿ ಶಿವನಿಗೆ ಒಂದು ಪೌರಾಣಿಕ ಹಿನ್ನೆಲೆಯಿರುವಂತೆ ವೈಷ್ಣವ ಧರ್ಮದಲ್ಲಿ ವಿಷ್ಣುವಿಗೆ ಮಹತ್ವದ ಸ್ಥಾನವುಂಟು. ವೇದಗಳಲ್ಲಿ ವಿಷ್ಣುವನ್ನು ಪ್ರಮುಖ ದೇವತೆಯೆಂದು ಉಲ್ಲೇಖಿಸದಿದ್ದರೂ ಅನೇಕ ವಿಷ್ಣವನ್ನು ವರಿಷ್ಠ ದೇವತೆಯೆಂದು ಉಲ್ಲೇಖಿಸಲಾಗಿದೆ. ಪ್ರಸ್ತುತ ಈ ಪರಿಸರದಲ್ಲಿ ಕಂಡುಬರುವಂತಹ ವೈಷ್ಣವ ದೇವಾಲಯಗಳ ರಚನೆ, ವಿನ್ಯಾಸವನ್ನು ವಾಸ್ತುಶೈಲಿಯ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ವಿವರಿಸಲಾಗಿದೆ.

ಗ್ರಾಮ : ಭರಮಸಾಗರ — ಕಾಲ : ಕ್ರಿ.ಶ.ಸು. ೧೮-೧೯ನೇ ಶತಮಾನ

ಸ್ಮಾರಕ : ಬಯಲು ಆಂಜನೇಯ — ಶೈಲಿ : ಸ್ಥಳೀಯ

ಸ್ಥಳ : ರಾಣಿಕೆರೆಯ ಎಡಬದಿಯಲ್ಲಿ — ಸ್ಥಿತಿ : ಉತ್ತಮ

ಅಭಿಮುಖ : ದಕ್ಷಿಣಾಭಿಮುಖ

ಈ ದೇವಾಲಯ ರಾಣಿಕೆರೆಯ ಎಡಬದಿಯಲ್ಲಿ ಕಂಡುಬರುತ್ತದೆ. ದಕ್ಷಿಣಾಭಿಮುಖ ವಾಗಿರುವ ಈ ದೇವಾಲಯವು ೧೮-೧೯ನೇ ಶತಮಾನದಲ್ಲಿ ನಿರ್ಮಾಣಗೊಂಡಿದೆ. ದೇವಾಲಯದಲ್ಲಿ ಗರ್ಭಗೃಹ, ಸಭಾಮಂಟಪ ಸಹ ಕಾಣಬಹುದಾಗಿದೆ. ಗರ್ಭಗೃಹದಲ್ಲಿ ಗುಂಡು ಕಲ್ಲನ್ನೇ ಆಂಜನೇಯನೆಂದು ಪೂಜಿಸಲಾಗುತ್ತದೆ. ಅಷ್ಟಮುಖಗಳಲ್ಲಿ ಕಡೆಯಲಾದ ಈ ದೀಪಸ್ತಂಭದಲ್ಲಿ ನಾಗರಹಾವು, ಶಿವಲಿಂಗ, ಪದ್ಮ, ಆಂಜನೇಯ, ಶಿಲ್ಪಗಳು ಕಾಣಬಹುದಾಗಿದೆ. ಗರ್ಭಗೃಹದಲ್ಲಿ ಮೇಲೆ ಗುಮ್ಮದಾಕಾರದ ಶಿಖರವಿದ್ದು, ಶಿಖರದಲ್ಲಿ ಹಿತ್ತಾಳೆಯ ಕಳಸವನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವಾಲಯವು ಪ್ರಸ್ತುತ ರಾಣಿಕೆರೆಯಲ್ಲಿ ಸಂಪೂರ್ಣವಾಗಿ ಮುಳುಗಡೆಯಾಗಿದೆ. ಈ ಕೆರೆಯಲ್ಲಿ ನೀರು ಕಡಿಮೆಯಾದರೆ ಮಾತ್ರ, ಈ ದೇವಾಲಯವನ್ನು ಕಾಣಬಹುದಾಗಿದೆ. ಪ್ರತಿ ವಾರದಲ್ಲಿ ಶನಿವಾರ ವಿಶೇಷ ಪೂಜೆ-ಪುನಸ್ಕಾರಗಳು ಹಾಗೂ ಕೆಲವು ಸಂದರ್ಭದಲ್ಲಿ ಮದುವೆಗಳು ನಡೆಯುತ್ತವೆ.

ಗ್ರಾಮ : ಬೊಂಬೇರಹಳ್ಳಿ — ಕಾಲ : ಕ್ರಿ.ಶ.ಸು. ೨೦ನೇ ಶತಮಾನ

ಸ್ಮಾರಕ : ತ್ರಿಕೂಟ ದೇವಾಲಯ — ಶೈಲಿ : ಸ್ಥಳೀಯ

ಸ್ಥಳ : ಗ್ರಾಮದ ದಕ್ಷಿಣಕ್ಕೆ — ಸ್ಥಿತಿ : ಉತ್ತಮ

ಅಭಿಮುಖ : ಪೂರ್ವಾಭಿಮುಖ

ಈ ದೇವಾಲಯವು ಬೊಂಬೇರಹಳ್ಳಿಯ ದಕ್ಷಿಣ ದಿಕ್ಕಿಗೆ ತ್ರಿಕೂಟ ದೇವಾಲಯ ಕಂಡುಬರುತ್ತದೆ. ಈ ತ್ರಿಕೂಟ ದೇವಾಲಯದಲ್ಲಿ ವೀರಗಾಲಕ್ಕಮ್ಮ, ಗಾದ್ರಿಪಾಲನಾಯಕ ಹಾಗೂ ಓಬಳನರಸಿಂಹಸ್ವಾಮಿಯು ಸಹ ಕಂಡುಬರುತ್ತದೆ. ಪೂರ್ವಾಭಿಮುಕವಾಗಿರುವ ಈ ತ್ರಿಕೂಟ ದೇವಾಲಯವು ಗರ್ಭಗೃಹ, ನವರಂಗ, ಸಭಾಮಂಟಪ ಹಾಗೂ ಪೆಟ್ಟಿಗೆ ಸಹ ಕಂಡುಬರುತ್ತದೆ. ಕಲ್ಲಿನ ಶಿಲೆಯಲ್ಲಿ ಈ ದೇವಾಲಯವನ್ನು ನಿರ್ಮಾಣ ಮಾಡಲಾಗಿದೆ. ೩ ದೇವಾಲಯಗಳು ಕಂಡುಬರುವುದರಿಂದ ತ್ರಿಕೂಟ ದೇವಾಲಯ ಎಂದು ಸಹ ಕರೆಯುತ್ತಾರೆ.

ಮೂರು ದೇವಾಲಯದ ಗರ್ಭಗೃಹದಲ್ಲಿ ಎರಡರಲ್ಲಿ ಶಿಲ್ಪ ಕಂಡುಬಂದರೆ ಮತ್ತೊಂದರಲ್ಲಿ ಪೆಟ್ಟಿಗೆ ಕಂಡುಬರುತ್ತದೆ. ದ್ವಾರಬಾಗಿಲಿನಲ್ಲಿ ಬಳ್ಳಿ ಉಬ್ಬು ಕೆತ್ತನೆಯ ಮುಖಾಂತರ ಕಡೆಯಲಾಗಿದೆ. ಈ ದೇವಸ್ಥಾನಕ್ಕೆ ತೆರೆದ ಸಭಾಮಂಟಪವಿದ್ದು ಇದಕ್ಕೆ ಪೂರ್ವ ದಿಕ್ಕಿನಲ್ಲಿ ಪ್ರವೇಶವನ್ನು ಕಲ್ಪಿಸಲಾಗಿದೆ. ಸಭಾಮಂಟಪದಲ್ಲಿ ಒಟ್ಟು ನಾಲ್ಕು ಕಂಬಗಳು ಕಂಡುಬಂದಿದ್ದು ಯಾವುದೇ ರೀತಿಯ ಅಲಂಕರಣೆ ಕಂಡು ಬಂದಿರುವುದಿಲ್ಲ. ಸಭಾಮಂಟಪ ಮೇಲ್ಛಾವಣಿಯಲ್ಲಿ ಗಾದ್ರಿಪಾಲನಾಯಕನ ವಿಗ್ರಹ ಕಂಡುಬರುತ್ತವೆ. ಮೂಲತಃ ಇದೊಂದು ತ್ರಿಕೂಟ ದೇವಾಲಯವಿರಬಹುದು.

ಗ್ರಾಮ : ಬೊಂಬೇರಹಳ್ಳಿ          ಕಾಲ : ಕ್ರಿ.ಶ.ಸು. ೨೦ನೇ ಶತಮಾನ
ಸ್ಮಾರಕ : ಹನುಮಂತ ದೇವಾಲಯ     ಶೈಲಿ : ಸ್ಥಳೀಯ
ಸ್ಥಳ : ಬೆಂಬೇರಹಳ್ಳಿಯ ಪಶ್ಚಿಮಕ್ಕೆ     ಸ್ಥಿತಿ : ಉತ್ತಮ
ಅಭಿಮುಖ : ದಕ್ಷಿಣಾಭಿಮುಖ

ಪೂರ್ವಭಿಮುಖವಾಗಿರುವ ಈ ದೇವಾಲಯವು ಗರ್ಭಗೃಹ, ಸಭಾಮಂಟಪ ಒಳಗೊಂಡಿದೆ. ಸಭಾಮಂಟಪದಲ್ಲಿ ಗಣೇಶನ ಶಿಲ್ಪ ಹಾಗೂ ಶ್ರೀರಾಮ, ಲಕ್ಷ್ಮಣ, ಸೀತಾದೇವಿ, ಹನುಮಂತ, ರಾಘವೇಂದ್ರ ಶಿಲ್ಪವು ಸಹ ಕಂಡು ಬರುತ್ತದೆ. ದ್ವಾರಬಾಗಿಲಿನಲ್ಲಿ ದಕ್ಷಿಣ ಭಾಗಕ್ಕೆ ಹನುಮಂತನ ಶಿಲ್ಪ ಸಹ ಕಾಣಬಹುದಾಗಿದೆ. ಈ ದೇವಸ್ಥಾನದ ಮುಂಭಾಗದಲ್ಲಿ ದೀಪದ ಸ್ತಂಭ ಸಹ ಕಾಣುತ್ತದೆ. ವರ್ಷದ ಶಿವರಾತ್ರಿಯ ಸಂದರ್ಭದಲ್ಲಿ ವಿಶೇಷ ಪೂಜೆ-ಪುನಸ್ಕಾರಗಳು ಹಾಗೂ ಅನ್ನದಾಸೋಹ ಕಾರ್ಯಕ್ರಮ ನಡೆಯುತ್ತದೆ. ಈ ದೇವಾಲಯವು ಜೀರ್ಣೋದ್ಧಾರಗೊಂಡಿದೆ ಎಂಬುದು ತಿಳಿಯುತ್ತದೆ.

### ೪.೩. ಶೈವ ಶಿಲ್ಪಗಳು

ಭಾರತೀಯ ಇತಿಹಾಸದಲ್ಲಿ ಶೈವ ಧರ್ಮಕ್ಕೆ ಅತ್ಯಂತ ಪ್ರಾಚೀನ ಇತಿಹಾಸವಿದೆ. ಹರಪ್ಪ ಸಂಸ್ಕೃತಿಯ ನೆಲೆಗಳಾದ ಹರಪ್ಪ, ಮಹೆಂಜೋದಾರೋ ಮತ್ತು ಕಾಲಿಬಂಗನ್ ಇತ್ಯಾದಿ ನೆಲೆಗಳಲ್ಲಿ ಅನೇಕ ಮುದ್ರೆಗಳು ದೊರೆತಿದ್ದು, ಅವುಗಳ ಮೇಲೆ ಪುರುಷ ದೇವತೆಗಳ ಚಿತ್ರಗಳಿವೆ. ಇವುಗಳಲ್ಲಿ ಯೋಗ ಮುದ್ರೆಯಲ್ಲಿ ಆಸೀನನಾಗಿರುವ ಮೂರು ಮುಖದ ಪಶುಪತಿ

ಶಿವನ ಚಿತ್ರ ಪ್ರಮುಖವಾದದ್ದು. ಬಹುಶಃ ಈ ಚಿತ್ರವೇ ಶಿವನ ಪ್ರಾಚೀನ ರೂಪವೆಂದು ಹೇಳಲಾಗುತ್ತಿದೆ. ಹಾಗಾಗಿ ಹರಪ್ಪ ಸಂಸ್ಕೃತಿಯ ಕಾಲದಲ್ಲಿ ಅಂದರೆ ಕ್ರಿ.ಪೂ. ೨೫೦೦ಕ್ಕೂ ಪೂರ್ವದಲ್ಲೇ ಶಿವಾರಾಧನೆ ಪ್ರಚಲಿತದಲ್ಲಿತ್ತೆಂದು ಹೇಳಬಹುದು. ನಂತರದ ವೈದಿಕ ಸಾಹಿತ್ಯದಲ್ಲಿ ಶಿವನ ಹಿನ್ನೆಲೆಯಲ್ಲಿ ರುದ್ರನನ್ನು ಕಾಣಬಹುದು. ಋಗ್ವೇದದ ಆರಂಭದ ಮಂಡಲಗಳಲ್ಲಿಯೇ ರುದ್ರನನ್ನು ಕುರಿತ ಉಲ್ಲೇಖಗಳಿವೆ ಶಿವನ ಇಪ್ಪತ್ನಾಲ್ಕನೇ ಅವತಾರವೆಂದು ಹೇಳಲಾದ ಲಕುಲೀಶನಿಂದ ಪಾಶುಪತ ಮತ್ತು ಪ್ರಾರಂಭವಾಯಿತು. ಈತನ ನಾಲ್ಕು ಜನ ಶಿಷ್ಯರಾದ ಕುಶಿಕ, ಗರ್ಗ, ಮೈತ್ರೇಯ ಮತ್ತು ಕಾರುಶ ಇವರಿಂದ ನಾಲ್ಕು ಪ್ರತ್ಯೇಕ ಪಾಶುಪತಗಳುಂಟಾದವು.

ಕರ್ನಾಟಕದಲ್ಲಿ ಶಾತವಾಹನ–ಕದಂಬ ಕಾಲಕ್ಕಾಗಲೇ ಶೈವಧರ್ಮವಿದ್ದುದ್ದಕ್ಕೆ ಸ್ಪಷ್ಟ ಆಧಾರಗಳಿವೆ. ಬಾದಾಮಿ ಚಾಲುಕ್ಯರ ಕಾಲಕ್ಕಾಗಲೇ ಈ ಧರ್ಮ ಉಚ್ಛ್ರಾಯ ಸ್ಥಿತಿಯನ್ನು ತಲುಪಿತ್ತು.[೧೩]

ಪ್ರಸ್ತುತ ಈ ಪರಿಸರದಲ್ಲಿ ಕ್ರಿ.ಶ ೯–೧೦ನೇ ಶತಮಾನದ ಶೈವಶಿಲ್ಪಗಳ್ನು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ವಿವರಿಸಲಾಗಿದೆ.

ಸಂಖ್ಯೆ : ೧

ಶಿಲ್ಪ : ವೀರಭದ್ರ ಮೂರ್ತಿ

ಸ್ಥಳ : ಶ್ರೀ ವೀರಭದ್ರ ದೇವಾಲಯದ ಗರ್ಭಗೃಹದಲ್ಲಿ

ಕಾಲ : ಕ್ರಿ.ಶ. ೧೭-೧೮ನೇ ಶತಮಾನ

ಊರು : ದೊಡ್ಡೇರಿ

ಈ ಮೂರ್ತಿಯು ಕರಿಕಲ್ಲಿನಿಂದ ರಚಿಸಲ್ಪಟ್ಟಿದೆ. ವೀರಭದ್ರ ದ್ವಿಭುಜಾಧಾರಿಯಾಗಿದ್ದು, ಬಲಗೈಯಲ್ಲಿ ಖಡ್ಗವನ್ನು ಹಿಡಿದು ಮೇಲಕ್ಕೆತ್ತಿದ್ದಾನೆ. ಎಡಗೈಯನ್ನು ದಂಡದ ಮೇಲೆ ಊರಿದ್ದಾನೆ. ಸೊಂಟದಿಂದ ತೊಡೆಯ ಭಾಗದವರೆಗೆ ನೆರಿಗೆಯಾಕಾರದ ವಸ್ತ್ರವನ್ನು ಧರಿಸಿದ್ದಾನೆ. ಈ ಮೂರ್ತಿಯು ಕಿರೀಟ ಪ್ರಭಾವಳಿಯನ್ನು ಕಿವಿಯಲ್ಲಿ ಓಲೆ, ಕೊರಳಿನಲ್ಲಿ ಕಂಠಹಾರ ಮತ್ತು ಉದ್ದವಾದಂತಹ ಸರವನ್ನು ಧರಿಸಿದ್ದಾನೆ. ಕೈಗಳಿಗೆ ಭುಜದಿಂದ ತೋಳಬಂದಿ, ಕಡಗವನ್ನು, ರುಂಡಮಾಲೆಯನ್ನು ಧರಿಸಿ ನಿಂತಿದ್ದಾನೆ. ಬಲಗಡೆಯಲ್ಲಿ ದಕ್ಷ ಬ್ರಹ್ಮ ಕೈ ಮುಗಿದು ನಿಂತುಕೊಂಡಿದ್ದಾನೆ.

ಸಂಖ್ಯೆ : ೨

ಶಿಲ್ಪ : ಗಣೇಶ

ಸ್ಥಳ : ಮಲ್ಲೇಶ್ವರ ದೇವಾಲಯದ ಮುಂದೆ

ಕಾಲ : ಕ್ರಿ.ಶ. ೯-೧೦ನೇ ಶತಮಾನ

ಈ ಗಣೇಶ ಶಿಲ್ಪವು ಚತುರ್ಭುಜಧಾರಿಯಾಗಿದ್ದು, ಬಲಗಡೆಯ ಕೈಯಲ್ಲಿ ದಂತ ಪರಶುಗಳನ್ನು ಎಡಗಡೆಯ ಕೈಗಳಲ್ಲಿ ಫಲವನ್ನು, ಪಾಶವನ್ನು ಹಿಡಿದಿದ್ದಾನೆ. ತನ್ನ ಸೊಂಡಿಲಿನಿಂದ ಫಲವನ್ನು ತಿನ್ನುವಂತಿದ್ದಾನೆ. ಬಲಗಾಲನ್ನು ಮಡಚಿಕೊಂಡು ಮುಂದಕ್ಕೆ ಇಟ್ಟುಕೊಂಡಿದ್ದಾನೆ. ಎಡಗಾಲನ್ನು ಮಡಚಿಕೊಂಡು ಪೀಠದ ಮೇಲೆ ಕೂತಿದ್ದಾನೆ. ಗಣೇಶನು ಕಿರೀಟವನ್ನು ಪ್ರಭಾವಳಿಯನ್ನು ಅಗಲವಾದಂತಹ ಕಿವಿಗಳನ್ನು ಹೊಂದಿದ್ದು, ಕೊರಳಲ್ಲಿ ದಪ್ಪನೆಯಾದಂತಹ ಕಂಠಾಭರಣ, ಉದ್ದವಾದಂತಹ ಸರವನ್ನು ಧರಿಸಿದ್ದಾನೆ. ಕೈಗಳಲ್ಲಿ ತೋಳಬಂದಿ, ಕಡಗವನ್ನು ಧರಿಸಿದ್ದಾನೆ. ತನ್ನ ಹೊಟ್ಟೆಗೆ ಹಾವನ್ನು ಸುತ್ತಿಕೊಂಡಿರುವುದು ಸಹಜವಾಗಿ ಕಂಡು ಬರುತ್ತದೆ.

ಸಂಖ್ಯೆ : ೩

ಶಿಲ್ಪ : ಗಣೇಶನ ವಿಗ್ರಹ

ಸ್ಥಳ : ಬಸವ ದೇವಾಲಯದ ಪಕ್ಕ

ಗ್ರಾಮ : ದೊಡ್ಡೇರಿ

ಕಾಲ : ಕ್ರಿ.ಶ. ೧೪-೧೫ನೇ ಶತಮಾನ

ಗಣೇಶನು ಚತುರ್ಭುಜದಾರಿಯಾಗಿದ್ದು ಬಲಗಡೆಯ ಮೊದಲ ಕೈಯಲ್ಲಿ ದಂತ, ಮೇಲಿನ ಕೈಯಲ್ಲಿ ಪರಶು, ಎಡಗಡೆಯ ಮೊದಲ ಕೈಯಲ್ಲಿ ಫಲವನ್ನು, ಅದಕ್ಕೆ ತನ್ನ ಸೊಂಡಲಿನಿಂದ ಹಣ್ಣನ್ನು ತಿನ್ನುವಂತಿದ್ದಾನೆ. ಮೇಲಿನ ಕೈಯಲ್ಲಿ ಪಾಶವನ್ನು ಹಿಡಿದಿದ್ದಾನೆ. ಈ ಗಣೇಶನ ಹೊಟ್ಟೆಯು ಚಿಕ್ಕದಾಗಿದ್ದು, ಹೊಟ್ಟೆಯ ಮೇಲಿರುವ ಆಭರಣಗಳು ಅಸ್ಪಷ್ಟವಾಗಿವೆ.

ಸಂಖ್ಯೆ : ೪

ಶಿಲ್ಪ : ಕಾರ್ತಿಕೇಯ

ಗ್ರಾಮ : ಚಿಕ್ಕ ಮಧುರೆ

ಸ್ಥಳ : ಚಿಕ್ಕ ಮಧುರೆ

ಕಾಲ : ಕ್ರಿ.ಶ. ೧೦-೧೧ನೇ ಶತಮಾನ

ಈ ವಿಗ್ರಹವನ್ನು ಕರಿಕಲ್ಲಿನಲ್ಲಿ ರಚಿಸಲಾಗಿದೆ. ಕಾರ್ತಿಕೇಯ ಚತುರ್ಭುಜದಾರಿಯಾಗಿದ್ದು, ತನ್ನ ಕೈಗಳಲ್ಲಿ ವಿವಿಧ ರೀತಿಯ ಆಭರಣಗಳನ್ನು ಧರಿಸಿರುವನು. ಕಿರೀಟವನ್ನು, ಕಿವಿಗಳಲ್ಲಿ ಓಲೆಯನ್ನು, ಕೊರಳಲ್ಲಿ ವಿವಿಧ ರೀತಿಯ ಸರಗಳನ್ನು ಧರಿಸಿದ್ದಾನೆ. ಕೈಗಳಲ್ಲಿ ತೋಳಬಂಧಿ, ಕಡಗವನ್ನು ಸೊಂಟದಲ್ಲಿ ಅಲಂಕಾರಿಕ ಪಟ್ಟಿಯನ್ನು ಧರಿಸಿದ್ದಾನೆ. ಕಾಲುಗಳಿಗೆ ಕಡಗವನ್ನು ಧರಿಸಿದ್ದಾನೆ.

## ೪.೪. ವೈಷ್ಣವ ಶಿಲ್ಪಗಳು

ಭಾರತೀಯರ ಪ್ರಾಚೀನ ಧರ್ಮಗಳಲ್ಲಿ ವೈಷ್ಣವ ಧರ್ಮವೂ ಒಂದು. ಇದರ ಪ್ರಾರಂಭದ ಉಲ್ಲೇಖಗಳನ್ನು ವೈದಿಕ ಸಾಹಿತ್ಯದಲ್ಲಿ ನೋಡಬಹುದು. ನಂತರ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಸಾಂಬ ಮತ್ತು ಅನಿರುದ್ಧರೆನ್ನವ ಪಂಚವೀರರು ಇದರ ಅನುಯಾಯಿಗಳಾಗಿದ್ದರಿಂದ ಇವರ ಆರಾಧನೆಯನ್ನು "ವೀರವಾದ" ಎಂದು ಕರೆಯಲಾಗುತ್ತದೆ. ಈ ವಾದದ ಪ್ರಕಾರ ವಾಸುದೇವನೇ ಶ್ರೇಷ್ಠ. ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧರು ಒಬ್ಬರಾದ ನಂತರ ಮತ್ತೊಬ್ಬರು ವಾಸುದೇವನಿಂದ ಆವಿರ್ಭವಿಸಿದರು. ಸುಮಾರು ಕ್ರಿ.ಶ. ೪ನೇ ಶತಮಾನದ ವೇಳೆಗೆ ಮಥುರಾ ಪ್ರದೇಶದ ಜನರು ವಾಸುದೇವನ ಅಥವಾ ಶ್ರೀಕೃಷ್ಣನ ಪೂಜೆಯನ್ನು ಮಾಡುತ್ತಿದ್ದರೆಂದು ಗ್ರೀಕ್ ರಾಯಭಾರಿ ಮೆಗಸ್ತಾನೀಸ್ ಮತ್ತು ಪಾಣಿನಿಯರು ಅಭಿಪ್ರಾಯಪಟ್ಟಿದ್ದಾರೆ. ವಿಷ್ಣುವಿನ ಆರಾಧನೆಯ ಹಿನ್ನೆಲೆಯಲ್ಲಿ ಪ್ರವರ್ಧಮಾನಕ್ಕೆ ಬಂದ ಈ ಧರ್ಮಕ್ಕೆ ಸಂಬಂಧಿಸಿದಂತೆ ಶಿಲ್ಪಗಳ ಲಕ್ಷಣಗಳು, ಹಿನ್ನೆಲೆ ಇತ್ಯಾದಿ ವಿವರಗಳು ಹಲವಾರು ಶಿಲ್ಪಶಾಸ್ತ್ರ ಗ್ರಂಥದಲ್ಲಿ ಉಲ್ಲೇಖಗೊಂಡಿವೆ. ಪಂಚರಾತ್ರಾಗಮದಲ್ಲಿ ಕೇಶವಾದಿ ಚತುರ್ವಿಂಶತಿ ಶಿಲ್ಪಗಳ ಬಳಕೆ ಹೆಚ್ಚಾಗಿರುವುದು ಕಂಡುಬರುತ್ತದೆ.[೧೪]

ಪ್ರಸ್ತುತ ಈ ಪರಿಸರದಲ್ಲಿ ವಿಷ್ಣು ಶಿಲ್ಪ, ವೈಷ್ಣವ ದ್ವಾರಪಾಲಕರು, ವಿಷ್ಣು ಶಿಲ್ಪವನ್ನು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ವಿವರಿಸಲಾಗಿದೆ.

ಸಂಖ್ಯೆ : ೧

ಶಿಲ್ಪ : ವಿಷ್ಣು

ಸ್ಥಳ : ಮಲ್ಲೇಶ್ವರ ದೇವಾಲಯದ ಮುಂಭಾಗ

ಗ್ರಾಮ : ಚಿಕ್ಕ ಮಧುರೆ

ಕಾಲ : ಕ್ರಿ.ಶ. ೧೨ನೇ ಶತಮಾನ

ಈ ವಿಗ್ರಹವು ಕರಿಕಲ್ಲಿನಿಂದ ರಚಿಸಲ್ಪಟ್ಟಿದೆ. ವಿಷ್ಣುವು ಚತುರ್ಭುಜದಾರಿಯಾಗಿದ್ದು, ಬಲಗಡೆಯ ಮೊದಲನೆಯ ಕೈಯಲ್ಲಿ ಗದೆಯನ್ನು, ಇನ್ನೊಂದು ಕೈಯಲ್ಲಿ ಶಂಖವನ್ನು, ಎಡಗಡೆಯ ಮೇಲಿನ ಕೈಯಲ್ಲಿ ಶಂಖವನ್ನು ಹಿಡಿದು ಇನ್ನೊಂದು ಕೈಯಲ್ಲಿ ಸೊಂಟದಲ್ಲಿಟ್ಟುಕೊಂಡಿದ್ದಾನೆ. ವಿಷ್ಣು ಅಲಂಕಾರಿಕ ಕಿರೀಟವನ್ನು ಕಿವಿಯಲ್ಲಿ ಓಲೆಯನ್ನು ಕೊರಳಲ್ಲಿ ವಿವಿಧ ರೀತಿಯ ಸರಗಳನ್ನು ಧರಿಸಿದ್ದಾನೆ. ಸೊಂಟದಲ್ಲಿ ಸೊಂಟಪಟ್ಟಿಯನ್ನು ಧರಿಸಿದ್ದಾನೆ.

ಸಂಖ್ಯೆ : ೨

ಶಿಲ್ಪ : ವೈಷ್ಣವ ದ್ವಾರಪಾಲಕರು

ಸ್ಥಳ : ಮಲ್ಲಿಕಾರ್ಜುನ ದೇವಾಲಯದ ಮುಂಭಾಗ

ಗ್ರಾಮ : ದೊಡ್ಡೇರಿ

ಕಾಲ : ಕ್ರಿ.ಶ. ೧೪-೧೫ನೇ ಶತಮಾನ

ಈ ವೈಷ್ಣವ ದ್ವಾರಪಾಲಕರು ಚತುಭುರ್ಜದಾರಿಗಳಾಗಿದ್ದು, ತಮ್ಮ ಕೈಗಳಲ್ಲಿ ಗಡಿಯನ್ನು, ಖಂಡವನ್ನು, ಚಕ್ರಗಳನ್ನು ಹಿಡಿದಿದ್ದಾರೆ. ಕಿರೀಟವನ್ನು ಕಿವಿಯಲ್ಲಿ ಓಲೆಗಳನ್ನು, ಸರಗಳನ್ನು ಧರಿಸಿದ್ದಾರೆ. ಕೈಗಳಲ್ಲಿ ಭಜಬಂಧಿ, ತೋಳಬಂಧಿ, ಕಡಗವನ್ನು ಧರಿಸಿದ್ದಾರೆ. ಸೊಂಟದಲ್ಲಿ ಸೊಂಟ ಪಟ್ಟಿಯನ್ನು ಸೊಂಟದಿಂದ ತೊಡೆಯ ಭಾಗದವರೆಗೆ ಕೇಶವಸ್ತ್ರವನ್ನು ಧರಿಸಿದ್ದಾರೆ. ಕಾಲುಗಳಿಗೆ ಕಡಗಳನ್ನು ಧರಿಸಿ ತ್ರಿಭಂಗಿಯಲ್ಲಿ ನಿಂತಿದ್ದಾರೆ.

ದ್ವಾರಪಾಲಕರು ತಮ್ಮ ಕೈಗಳಲ್ಲಿ ಶಂಖ ಚಕ್ರಗಳನ್ನು ಹಿಡಿದಿರುವುದರಿಂದ ಇವರನ್ನು ವೈಷ್ಣವ ದ್ವಾರಪಾಲಕರು ಎಂದು ಗುರುತಿಸಲಾಗಿದೆ. ಇವುಗಳು ಬಾಗಿಲವಾಡದ ಪಟ್ಟಿಕೆಯಾಗಿವೆ.

ಸಂಖ್ಯೆ : ೩

ಶಿಲ್ಪ : ವಿಷ್ಣು

ಸ್ಥಳ : ಆಂಜನೇಯ ದೇವಾಲಯದ ಮುಂಭಾಗ

ಗ್ರಾಮ : ಚಿಕ್ಕ ಮಧುರೆ

ಕಾಲ : ಕ್ರಿ.ಶ. ೧೨-೧೩ನೇ ಶತಮಾನ

ಈ ವಿಷ್ಣು ಕಪ್ಪು ಶಿಲ್ಪವು ಗ್ರಾನೈಟ್‌ನಲ್ಲಿದೆ. ವಿಷ್ಣುವು ಚತುರ್ಭುಜದಾರಿಯಾಗಿದ್ದು, ಬಲಗಡೆಯ ಮೊದಲು ಕೈಯಲ್ಲಿ ಗದೆ, ಇನ್ನೊಂದು ಕೈಯಲ್ಲಿ ಚಕ್ರವನ್ನು, ಎಡಗಡೆಯ ಮೇಲಿನ ಕೈಯಲ್ಲಿ ಶಂಖವನ್ನು ಕೆಳಗಿನ ಕೈಯಲ್ಲಿ ಸೊಂಟಕ್ಕೆ ಇಟ್ಟುಕೊಂಡಿದ್ದಾರೆ. ವಿಷ್ಣುವು ಉದ್ದವಾದ ಕಿರೀಟವನ್ನು ಕಿವಿಯ ಓಲೆಯನ್ನು, ಕೊರಳಲ್ಲಿ ಕಂಠಾಭರಣ, ಸರ ವೈಜಯಂತಿಯನ್ನು ಧರಿಸಿದ್ದಾನೆ. ಸೊಂಟದಲ್ಲಿ ಅಲಂಕಾರಿಕ ಪಟ್ಟಿಯನ್ನು ಹಾಕಿಕೊಂಡಿದ್ದಾನೆ. ಸೊಂಟದಿಂದ ಕೆಳಭಾಗದವರೆಗೆ ಹಾಕಿಕೊಂಡಿರುವ ವಸ್ತ್ರವು ಅಸ್ಪಷ್ಟವಾಗಿದೆ. ಕಾಲಿನಲ್ಲಿ ಕಡಗವನ್ನು ಧರಿಸಿ ನಿಂತಿದ್ದಾನೆ.

### ೪.೫. ಶಾಕ್ತ ದೇವತೆಗಳು

ಭಾರತದಲ್ಲಿ ಬಂಗಾಳ ಮತ್ತು ಅಸ್ಸಾಮವನ್ನು ಬಿಟ್ಟರೆ ಶಾಕ್ತ ಪ್ರಭಾವ ದಟ್ಟಾಗಿರುವ ಪ್ರದೇಶಗಳಲ್ಲಿ ಕರ್ನಾಟಕವೂ ಒಂದು. ಇಲ್ಲಿ ಶಾಕ್ತ ದೈವವಿಲ್ಲದೆ ಊರೇ ಇಲ್ಲವೆನ್ನಬಹುದು. ಈ ದೈವಗಳನ್ನು ಜನರು ಅಪ್ಪ, ಅಮ್ಮ, ಅಕ್ಕ ಮುಂತಾದ ಸಂಬಂಧ ವಾಚಕಗಳನ್ನು ಹಚ್ಚಿ ಆಪ್ತವಾಗಿ ಕರೆಯುವರು. ಕೆಲವು ದೈವಗಳು ತಾವು ನೆಲೆಸಿರುವ ಊರಿನ ಹೆಸರಿಗೆ 'ಅಮ್ಮ'

ಶಬ್ದವನ್ನು ಸೇರಿಸಿಕೊಂಡೇ ಜನಪ್ರಿಯವಾಗಿದೆ. ಕರ್ನಾಟಕದ ತುಂಬ ವ್ಯಾಪಕವಾಗಿ ಸಿಗುವ ಶಾಕ್ತೇಯ ಕುರುಹುಗಳು ಈ ನಾಡಿನ ಬಹುಸಂಖ್ಯಾತ ಜನರ 'ಮತ'ಗಳಲ್ಲಿ ಶಾಕ್ತವೂ ಒಂದೆಂದು ದೃಢಪಡಿಸುತ್ತದೆ. ಈ ಲೋಕದಲ್ಲಿ ಬೇಸಾಯ ಸಂತಾನ ಹಯನಗಳಿಗೆ ಸಂಬಂಧಪಟ್ಟ ಸಮೃದ್ಧಿ ಕೇಂದ್ರಿತ ದೈವಗಳಿಗೆ; ಉಪಕರಣದ ಮೂಲಕ ಸರಕು ಸೃಷ್ಟಿಸುವ ಕುಶಲಕರ್ಮಿ ದೈವಗಳ ಉತ್ಪಾದನಾ ಕೇಂದ್ರಿತ ದೈವಗಳಿವೆ. ಪ್ರಭುತ್ವ, ಆಯುಧ, ಯುದ್ಧ ಮುಖವಾಗಿರುವ ಸಂಹಾರ ಕೇಂದ್ರಿತ ದೇವತೆಗಳಿವೆ. ಈ ಬೇಸಾಯ, ಪಶುಪಾಲನೆ, ಕಸುಬುಗಾರಿಕೆ ಹಾಗೂ ಕಾಳಗ ಸಂಸ್ಕೃತಿಗಳು ಒಂದೇ ಶಾಕ್ತೇಯ ಚೌಕಟ್ಟಿನಲ್ಲಿ ಕಟ್ಟಿಗೊಂಡಿದೆ. ಈ ಚೌಕಟ್ಟು ಶಾಕ್ತ ಲೋಕದ ಅಖಿಲ ಭಾರತೀಯ ಹರಹನ್ನು ಮಾತ್ರವಲ್ಲ ಅದರ ಸ್ಥಳೀಕರಣವನ್ನೂ ಕಾಣಿಸುವ ಕನ್ನಡಿ ಕೂಡ ಆಗಿದೆ. ಇಲ್ಲಿ ಮಹಿಷಾಸುರ ಮರ್ದಿನಿ, ಕಾಳಿಯಂತಹ ದೇಶವ್ಯಾಪಿಯಾಗಿ ಪೌರಾಣಿಕ 'ದೇವತೆ'ಗಳಿದ್ದರೂ ಅವುಗಳ ಪ್ರಭಾವ ಕಡಿಮೆ. ಎಲ್ಲಮ್ಮ, ಹುಲಿಗೆಮ್ಮ, ಮಾರಮ್ಮ, ದ್ಯಾವಮ್ಮ, ಕರಿಯಮ್ಮ, ದುರ್ಗಾಂಬಿಕಾ, ಕಟ್ಟೆಮಾರಕ್ಕ, ಕೊಲ್ಲಾಪುರಮ್ಮ, ಕುಕ್ಲುಟಮ್ಮ, ಚಳ್ಳಕ್ಕೆರೇಮ್ಮ ಮುಂತಾದ ದೇವತೆಗಳ ದೇವಾಲಯಗಳನ್ನು ಚಳ್ಳಕೆರೆ ಕಸಬಾ ಹೋಬಳಿಯಲ್ಲಿ ಕಂಡು ಬರುತ್ತವೆ.[೧೫]

ಚರಿತ್ರೆಯ ಹಲವಾರು ಕಾಲಘಟ್ಟಗಳೊಳಗೆ ಹಾಯುತ್ತ ಜಟಿಲ, ರೂಪಧಾರಣೆ ಮಾಡಿರುವ ಕರ್ನಾಟಕದ ಶಾಕ್ತ ಲೋಕವನ್ನು, ಸಂಘರ್ಷ ಸಮನ್ವಯ ಸಂಕರ ಮತ್ತು ರೂಪಾಂತರ ತತ್ವಗಳಿಲ್ಲದೆ ಅರ್ಥೈಸಲು ಸಾಧ್ಯವಿಲ್ಲ. ಈ ತತ್ವಗಳನ್ನು ಅರಿಯಲು ಒದಗುವ ಆಕರಗಳಾದರೂ ಬಹುಮುಖಿಯಾಗಿವೆ.

ನೈಸರ್ಗಿಕವಾದ ಬನಕಣಿವೆ ಕೆರೆ ಹೊಳೆಗಳು; ಕಲ್ಲು ಕಟ್ಟಿಗೆ ಮಣ್ಣು ರೂಪದ ಮೂರ್ತಿಗಳು; ಗುಡಿ ತೇರು ಕಟ್ಟೆ-ದಿಬ್ಬದಂತಹ ವಾಸ್ತುರಚನೆಗಳು; ಜಗ ಕಳಸ ಕತ್ತಿ ಸಿಡಿಕಂಬ ಹಾಲ್ಲಂಬ ಹಲಗೆ ಡಕ್ಕೆ, ಚೌಡಿಕೆ ಇತ್ಯಾದಿ ವಸ್ತುಲೋಕ; ದೀಕ್ಷೆ ಕೊಡುವ, ಚರಗ ಚೆಲ್ಲುವ, ಕರಗ ಹೊರುವ, ಬಲಿ ಕೊಡುವ, ರಂಗ ಹೊಯ್ಯು, ಮುಡೆ ಬೇಯಿಸುವ, ಉಣ್ಣುವ ಆಚರಣೆಗಳು ಸಹ ಈ ಪ್ರದೇಶದಲ್ಲಿ ಕಂಡು ಬರುತ್ತವೆ.[೧೬]

ಚಳ್ಳಕೆರೆ ಕಸಬಾ ಹೋಬಳಿಯ ಪರಿಸರದಲ್ಲಿ ಕ್ರಿ.ಶ.ಸು. ೧೭-೧೮ನೇ ಶತಮಾನದ ಹಾಗೂ ಪಾಳೆಗಾರರ ಶೈಲಿಯಲ್ಲಿ ನಿರ್ಮಾಣವಾದಂತಹ ಚಳ್ಳಕೇರಮ್ಮನ ದೇವಾಲಯವು ಶಾಕ್ತ ದೇವಾಲಯವೆಂದು ಗುರುತಿಸಲಾಗಿದೆ.

ಚಳ್ಳಕೇರಮ್ಮ, ದೇವಾಲಯದ ರಚನೆ, ವಿನ್ಯಾಸವನ್ನು ವಾಸ್ತುಶೈಲಿಯ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ವಿವರಿಸಲಾಗಿದೆ.

ಸಂಖ್ಯೆ : ೧

ಸ್ಮಾರಕ : ಚಳ್ಳಕೇರಮ್ಮ

ಸ್ಥಳ : ಚಳ್ಳಕೆರೆ ನಗರದ ಮಧ್ಯೆ

ಕಾಲ : ಕ್ರಿಶ. ೧೭-೧೮ನೇ ಶತಮಾನ

ಶೈಲಿ : ಪಾಳೆಯಗಾರ

ಅಭಿಮುಖ : ಪೂರ್ವಾಭಿಮುಖ

ಸ್ಥಿತಿ : ಉತ್ತಮ

ಶಾಕ್ತ ದೇವಾಲಯಗಳಲ್ಲಿ ಚಳ್ಳಕೇರಮ್ಮ ದೇವತೆಯು ಚಳ್ಳಕೆರೆ ತಾಲ್ಲೂಕಿನ ಕಸಬಾ ಹೋಬಳಿಯಲ್ಲಿ ಚಾರಿತ್ರಿಕ ಶಾಕ್ತದೇವತೆಗೆ ಪ್ರಮುಖ ಹೆಸರು ಪಡೆದಿದೆ. ಚಿತ್ರದುರ್ಗದ ಪಾಳೆಯಗಾರರ ಮನೆದೇವತೆಯಾದ್ದರಿಂದ ಅವರ ವಂಶಸ್ಥರು ಈ ದೇವತೆಯನ್ನು ಮನೆಯ ಹೆಣ್ಣುಮಗಳಂತೆ ಕಾಣುತ್ತಾರೆ. ಈ ದೇವಾಲಯವು ಪೂರ್ವಾಭಿಮುಖವಾಗಿದ್ದ ಚಿತ್ರದುರ್ಗ ಪಾಳೆಯಗಾರರ ಕಾಲದಲ್ಲಿ ರಚನೆಯಾಗಿರುತ್ತದೆ. ಆದರೆ ಇದಕ್ಕೆ ಯಾವುದೇ ರೀತಿಯ ಲಿಖಿತ ದಾಖಲೆಗಳು ಲಭ್ಯವಿರುವುದಿಲ್ಲ. ಚಳ್ಳಕೇರಮ್ಮನಿಗೂ ಇಲ್ಲಿಯ ಪಾಳೆಯಗಾರರ ಅರಸು ಮನೆತನದವರಿಗೂ ತಳಕು ಹಾಕಿಕೊಂಡಿರುವ ಅನೇಕ ಸಂಪ್ರದಾಯ ಅವರ ಸಂಬಂಧವನ್ನು ಹೇಳುತ್ತದೆ.

ಚಳ್ಳಕೇರಮ್ಮ ದೇವಾಲಯು ಗರ್ಭಗೃಹ, ಅಂತರಾಳ, ಸಭಾಮಂಟಪ(ನವರಂಗ) ತೆರೆದ ಮುಖಮಂಟಪಗಳಿಂದ ಕೂಡಿದೆ. ಈ ದೇವಾಲಯದ ಗರ್ಭಗುಡಿಯು ಅಲಂಕಾರ ರಹಿತವಾಗಿದೆ ಹಾಗೂ ಗರ್ಭಗೃಹದಲ್ಲಿರುವ ಅಮ್ಮನವರ ಶಿಲ್ಪವು ಮುಖ ಮಾತ್ರವಿದೆ. ನಾಗರಹೆಡೆ ಮುಖದ ಮೇಲಿದೆ. ಸದ್ಯ ಹಿತ್ತಾಳೆಯ ಮುಖವಾಡವನ್ನು ಶಿಲ್ಪಕ್ಕೆ ಹೊದಿಸಲಾಗಿದೆ. ಅಂತರಾಳಧ ಬಾಗಿಲುವಾಡವನ್ನು ಹಿತ್ತಾಳೆಯ ಹೊದಿಕೆಯಿಂದ ಮುಚ್ಚಲಾಗಿದೆ. ಇದನ್ನು ದ್ವಾರಪಾಲಕರು, ಸಿಂಹ, ಲಕ್ಷ್ಮಿ, ಗಣೇಶ, ಆನೆ, ಕುದುರೆ, ಹೂಬಳ್ಳಿಗಳಿಂದ ಅಲಂಕರಣೆ ಮಾಡಲಾಗಿದೆ.

ಗರ್ಭಗುಡಿಯೊಳಗೆ ಒಂದು ಜಗತಿಯಿದ್ದು, ಅದರ ಮೇಲೆ ಅಲಂಕಾರಗಳನ್ನು ಹೊಂದಿದ ಏಳು ಹೆಡೆ ಶಿರಸ್ತ್ರಾಣವಿರುವ ಎರಡು ಸುಂದರವಾದ, ಮೂಲ ಮೂರ್ತಿಯ ಸ್ತ್ರೀ ರುಂಡಗಳಿವೆ. ಒಂದು ಚಳ್ಳಕೇರೆಮ್ಮ ಮತ್ತೊಂದು ಬಿಡಾರದಮ್ಮ. ಅಚ್ಚರಿಯ ಸಂಗತಿಯೆಂದರೆ ಇವೆರಡೂ ವಿಗ್ರಹಗಳನ್ನು ಒಂದೇ ಪೀಠದಲ್ಲಿ ಪ್ರತಿಷ್ಠಾಪಿಸಿದ್ದಾರೆ. ಹೀಗಾಗಿ ಇದೊಂದು ಶಕ್ತಿ ಆರಾಧನೆಯ ಪ್ರಾಚೀನ ನೆಲೆ ಇರಬಹುದೇ ಎಂಬ ಅನುಮಾನಗಳನ್ನು ಹುಟ್ಟು ಹಾಕುತ್ತದೆ. ಸುಮಾರು ಒಂದುವರೆ ಅಡಿ ಎತ್ತರ, ಅಗಲ ಇರುವ ಸ್ತ್ರೀ ರುಂಡದ ವಿಗ್ರಹಗಳು ನಮ್ಮನ್ನು ಪ್ರಾಚೀನ ನೆಲೆಯತ್ತ ಕೊಂಡೊಯ್ದರೆ ಆಶ್ಚರ್ಯವಿಲ್ಲ.[೧೭] ಕೆಲ ವಿದ್ವಾಂಸರು ಈ ವಿಗ್ರಹಗಳನು ಜೈನ

ಯಕ್ಷಿಯರಿರಬಹುದೆಂದು ಊಹಿಸುತ್ತಾರೆ. ಬಿಡಾರದಮ್ಮ ಎಂದು ಹೇಳುವ ವಿಗ್ರಹಕ್ಕೆ ಮಾತ್ರ ನಾಗರಹೆಡೆ ಪ್ರಭಾವಳಿ ಇದ್ದು, ಚಳ್ಳಕೇರೆಮ್ಮ ಎಂದು ಹೇಳುವ ವಿಗ್ರಹಕ್ಕೆ ಆ ಬಗೆಯ ಯಾವ ಪ್ರಭಾವಳಿಯು ಇಲ್ಲದಿರುವುದು ಸೋಜಿಗನ್ನುಂಟುಮಾಡಿದೆ. ಅದೊಂದು ನಾಗದೇವತೆಯ ವಿಗ್ರಹವಿರಬಹುದು. ಈಗಾಗಲೇ ಅಲ್ಲಿದ್ದಿರಬಹುದಾದ ನಾಗದೇವತೆಯ ವಿಗ್ರಹದ ಪಕ್ಕದಲ್ಲೇ 'ಚಳ್ಳಕೇರಮ್ಮನ' ವಿಗ್ರಹವನ್ನು ಪ್ರತಿಷ್ಠಾಪಿಸಿ, ಈಗಾಗಲೇ ಅಲ್ಲಿದ್ದ ದೇವಾಲಯವನ್ನು ವಿಸ್ತರಿಸಿ ಅಭಿವೃದ್ಧಿ ಪಡಿಸಿರಬಹುದೇ ಹೀಗೆ ನಮ್ಮನ್ನು ಊಹೆಗಳ ಲೋಕಕ್ಕೆ ಒಯ್ಯುತ್ತದೆ.[೧೮] ದೇವಸ್ಥಾನದ ವಾಸ್ತುಶಿಲ್ಪವನ್ನು ಗಮನಿಸಿದರೆ ಇದು ವಿಜಯನಗರೋತ್ತರ ಶೈಲಿಯದು ಎನಿಸುತ್ತದೆ. ಸಿಂಹಮುಖದ ಚಿತ್ರ, ಒಂಟಿ ಸಂಗೀತದ ಕಂಬದ ಆಕೃತಿಯನ್ನು ಗಮನಿಸಿದರೆ ಇದು ೧೮೦೦ ಅಸುಪಾಸಿನಲ್ಲಿ ನಿರ್ಮಾಣವಾದಂತೆ ತೋರುತ್ತದೆ. ಎರಡೂ ರುಂಡುಗಳಿಗೆ ಕಿವಿಯಲ್ಲಿ ಬಿಚ್ಚೋಲೆಯಂತಹ ಆಭರಣ, ಮೂಗುತಿ, ಹಣೆಯ ಮೇಲೆ ತಿಲಕವಿದೆ. ಚಳ್ಳಕೇರಮ್ಮನ ಹಿಂಭಾಗದಲ್ಲಿ ಕೀರ್ತಿ ಮುಖವಿರುವ ಹೂಬಳ್ಳಿಗಳಿಂದ ಕೂಡಿದ ಪ್ರಭಾವಳಿಯಿದೆ. ಬಿಡಾರದಮ್ಮನ ಮುಖ ವಿಶಾಲವಾಗಿದ್ದು ದೇವಿಯ ದೇಹವು ಭೂಮಿಯೊಳಗಿದೆ ಎಂದು ದೇವಸ್ಥಾನದ ಪೂಜಾರಿಗಳು ಹೇಳುತ್ತಾರೆ. ಕೋರೆಹಲ್ಲುಗಳಿರುವ ಮುಖವಾಡವನ್ನು ಅಳವಡಿಸಿ ಒಂದರ ಮೇಲೆ ಒಂದರಂತೆ ಹತ್ತೊಂಬತ್ತು ಸೀರೆಗಳನ್ನು ಉಡಿಸಿ, ಕೈಗಳಲ್ಲಿ ಕತ್ತಿ ಗುರಾಣಿಗಳನ್ನು ಕೊಟ್ಟು, ಪಾದಗಳ ಮುಂಭಾಗದಲ್ಲಿ ಕವಚಗಳ ನಡುವೆ ಸಿಂಹಮುಖವನ್ನು ಇಟ್ಟು ದೇವತೆಯನ್ನು ಸಿಂಹವಾಹಿನಿಯನ್ನಾಗಿ ಮಾಡಿರುತ್ತಾರೆ. ಬಿಡಾರದಮ್ಮನಿಗೆ ಯಾವುದೇ ಅಲಂಕಾರವಾಗಿಲಿ ವಿಶೇಷ ಪೂಜೆಯಾಗಲೀ ಇಲ್ಲ. ಗರ್ಭಗುಡಿಯ ಹೊರಗೆ ಬಲಪಕ್ಕದಲ್ಲಿ ವೀರಭದ್ರಸ್ವಾಮಿಯನ್ನು ಪ್ರತಿಷ್ಠಾಪಿಸಿದ್ದು, ಅದಕ್ಕೂ ನಿತ್ಯ ಪೂಜೆ ಸಲ್ಲುತ್ತದೆ. ಇವನನ್ನು ಚಳ್ಳಕೇರಮ್ಮನ ತಮ್ಮನೆಂದು ಕರೆಯಲಾಗುತ್ತದೆ.

ನವರಂಗದಲ್ಲಿ ಉಬ್ಬುಶಿಲ್ಪಗಳಿಂದ ಕೂಡಿದ ನಾಲ್ಕು ಕಂಭಗಳು ಮಧ್ಯಭಾಗದಲ್ಲಿದೆ. ಈ ಕಲ್ಲುಕಂಭಗಳ ತುಂಬಾ ಸಿದ್ಧ ಭಂಗಿಯ ದಾಡಿ ಇರುವ ಸಿದ್ಧ ಪುರುಷರ ಚಿತ್ರಗಳೇ ಇರುವುದು ನೋಡಿದರೆ ಇದೊಂದು ಶಾಕ್ತ ಪಂಥದ ಸಿದ್ದರ ಕೇಂದ್ರವಾಗಿದ್ದಿರಬಹುದೇ ಎಂಬ ಅನುಮಾನಗಳು ಸುಳಿಯುತ್ತವೆ.[೧೯] ಈ ದೇವಾಲಯದ ಶಿಲ್ಪಕಲಾ ಚಾತುರ್ಯವೆಲ್ಲಾ ಕಂಬಗಳಲ್ಲೇ ಅಡಗಿದೆ. ಕಂಬದ ಸಾಲು ಬದಿಗಳಲ್ಲಿ ಭೈರಾಗಿ, ಗಿಣಿಕೋತಿ, ಸಿಂಹ-ನಂದಿ, ಹೂಜಿ, ಕೃಷ್ಣ, ಹುಲಿ, ಮನುಷ್ಯ ಮುಖದ ಪಶು ಇಂತಹ ಚಿತ್ರಗಳನ್ನು ಕೆತ್ತಲಾಗಿದೆ.

ಈ ದೇವಾಲಯದ ವೈಶಿಷ್ಟ್ಯವೆಂದರೆ ೪ ಕಂಭಗಳ ಮಧ್ಯದಲ್ಲಿಯ ಭುವನೇಶ್ವರ ಮಧ್ಯದಲ್ಲಿ ಚೌಕಾಕಾರವಾದ ಎರಡು ಚಪ್ಪಡಿ ಕಲ್ಲುಗಳನ್ನು ಒಂದರ ಮೇಲೆ ಒಂದು ಅಷ್ಟಕೋನವಾಗುವಂತೆ ಅಳವಡಿಸಿದೆ. ಒಂದೊಂದು ಕೋನಗಳಲ್ಲಿಯು ಮಾನವ ಶಿಲ್ಪಗಳು ಯೋಗ್ಯ ಭಂಗಿಗಳಲ್ಲಿ ವಿವಿಧ ವಾಹನಗಳ ಮೇಲೆ ಆಸೀನರಾಗಿದ್ದಾರೆ. ಅವುಗಳ ವಾಹನಗಳು ದಿಗ್ಭಾಗಗಳು ಇಂತಿವೆ. ಉತ್ತರ-ಆಮೆ, ಈಶಾನ್ಯ-ಮೀನು, ಪೂರ್ವ-ಮೊಲ, ಆಗ್ನೇಯ-ಹಾವು, ದಕ್ಷಿಣ-ನವಿಲು, ನೈರುತ್ಯ-

ವೃಷಭ, ಪಶ್ಚಿಮ-ಸಿಂಹ, ವಾಯುವ್ಯ-ಇಲಿ. ಪ್ರತಿಯೊಂದು ಮೂರ್ತಿಗಳು ಕರ್ಣಕುಂಡಲಗಳು, ಹಾರಗಳು, ಬಳೆಗಳು, ವೈವಿಧ್ಯಮಯ ಕೇಶವಿನ್ಯಾಸಗಳಿವೆ. ಈ ಶಿಲ್ಪಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಯೋಗಸಿದ್ಧನಾಥರ ಸೌಮ್ಯತೆ ಕಂಡುಬರುತ್ತದೆ. ವಿಜಯನಗರೋತ್ತರ ಕಾಲದಲ್ಲಿ ನಾಥಪಂಥವು ವೀರಶೈವ ಹಾಗೂ ವೈದಿಕ ಪಂಥಗಳ ಸಂದಿಗ್ಧ ಕಾಲದಲ್ಲಿ ಈ ದೇವಾಲಯ ನಿರ್ಮಾಣವಾಗಿದೆ ಎಂದು ಹೇಳಬಹುದು.[೨೦]

ವಿಶಾಲವಾದ ಮುಖಮಂಟಪವು ಇದ್ದು ಇದರಲ್ಲಿ ಅನೇಕ ಬಗೆಯ ಚಿತ್ರಗಳನ್ನು ಕೆತ್ತಲಾಗಿದೆ. ದ್ವಾರದ ಎರಡೂ ಬದಿಯಲ್ಲಿ ದ್ವಾರ ಪಾಲಕಿಯರ ವಿಗ್ರಹಗಳನ್ನು ಕೆತ್ತಲಾಗಿದ್ದು ಇದೊಂದು ಶಕ್ತಿ ಆರಾದನೆಯ ಕೇಂದ್ರವೆಂದು ಶೃತಪಡಿಸುತ್ತದೆ. ಈ ದ್ವಾರಕ್ಕೂ ಹೊಂದಿಕೊಂಡೇ ಆನೆ ಚಿತ್ರದ ಸೋಪಾನಗಳನ್ನು ನಿರ್ಮಿಸಿದ್ದಾರೆ. ನವರಂಗದಲ್ಲಿ ದಕ್ಷಿಣ ದಿಕ್ಕಿಗೆ ಒಂದು ದ್ವಾರಬಾಗಿಲು ಇದ್ದು ಆನೆ ಚಿತ್ರದ ಸೋಪಾನಗಳನ್ನು ನಿರ್ಮಿಸಿದ್ದಾರೆ.

ದೇವಸ್ಥಾನದ ಹೊರ ಕವಚದಲ್ಲಿ ಸಿಂಹ, ಸರ್ಪ ನುಂಗುತ್ತಿರುವ ಸಿಂಹ, ಹುಲಿ ಸವಾರಿ ಮಾಡುತ್ತಿರುವ ನರಸಿಂಹ, ಎರಡು ದೇಹ ಒಂದು ತಲೆಯ ಸಿಂಹ, ಚರ್ತುರ್ಮುಖ ನಂದಿ ಮೃದಂಗ ಬಾರಿಸುತ್ತಿರುವ ಕಲಾವಿದೆ. ಇಂತಹ ಅಪರೂಪದ ಚಿತ್ರಗಳ ಕೆತ್ತನೆಯೂ ಇದೆ. ಗರ್ಭಗುಡಿಯ ಮೇಲೆ ನಿರ್ಮಿಸಿರುವ ಶಿಖರ ಪ್ರಾರಂಭದಲ್ಲೇ ಚಚ್ಚೌಕವಾಗಿದ್ದು, ನಾಲ್ಕು ಬದಿ ಎರಡು ದೇಹ ಒಂದು ಸಿಂಹದ ಮುಖವುಳ್ಳ ಆಕೃತಿಗಳನ್ನು ನಿರ್ಮಿಸಲಾಗಿದೆ. ಮೇಲಕ್ಕೆ ಹೋದಂತೆ ಶಿಖರ ವೃತ್ತಾಕಾರವಾಗಿ ಗುಮ್ಮಟದ ಆಕಾರವನ್ನು ತಳೆದು, ತುದಿಯಲ್ಲಿ ಕಂಚಿನ ಕಳಸದೊಂದಿಗೆ ಕಂಗೊಳಿಸುತ್ತ ಆಕರ್ಷಕವಾಗಿ ಕಾಣುತ್ತದೆ. ದೇವಸ್ಥಾನದ ಹೊರಗಡೆ ಗರ್ಭಗುಡಿಗೆ ಎದುರಾಗಿ ದೀಪಸ್ತಂಭವನ್ನು ನಿಲ್ಲಿಸಲಾಗಿದೆ.

ಸಂಖ್ಯೆ : ೨

ಸ್ಮಾರಕ : ದುರ್ಗಾದೇವಿ

ಸ್ಥಳ : ಬೊಂಬೇರಹಳ್ಳಿ

ಕಾಲ : ಕ್ರಿ.ಶ. ೧೯೨೯

ಶೈಲಿ : ಸ್ಥಳೀಯ

ಅಭಿಮುಖ : ದಕ್ಷಿಣಾಭಿಮುಖ

ಸ್ಥಿತಿ : ಉತ್ತಮ

ಚಳ್ಳಕೆರೆಯಿಂದ ೨೨ ಕಿಲೋಮೀಟರ್ ದೂರದಲ್ಲಿರುವ ಬೊಂಬೇರಹಳ್ಳಿಯ ಶಾಕ್ತ ದೇವತೆಯಾದ ದುರ್ಗಾದೇವಿಯ ದಕ್ಷಿಣಾಭಿಮುಖವಾಗಿ ಈ ದೇವಾಲಯವು ನಿರ್ಮಾಣ ಗೊಂಡಿದೆ. ಈ ದೇವಾಲಯದಲ್ಲಿ ಗರ್ಭಗೃಹ, ಸಭಾಮಂಟಪ, ನವರಂಗ ಸಹ ಒಳಗೊಂಡಿದೆ.

ಈ ದೇವಸ್ಥಾನವನ್ನು ನಿರ್ಮಾಣ ಮಾಡಲು ಕಲ್ಲಿನ ಶಿಲೆಯನ್ನು ಬಳಸಿರುವುದು ಸಹಜವಾಗಿ ಕಂಡುಬರುತ್ತದೆ.

ಗರ್ಭಗೃಹದಲ್ಲಿ ಬೆಳ್ಳಿಯ ದುರ್ಗದೇವಿಯ ಪ್ರತಿಮೆಯನ್ನು ಇಟ್ಟು ಪೂಜಿಸಲಾಗುತ್ತದೆ. ದೇವಿಯು ಹುಲಿ ಸವಾರಿಯಲ್ಲಿರುವಳು. ತನ್ನ ಕೈಯಲ್ಲಿ ಚಕ್ರ, ಗದೆ, ತ್ರಿಶೂಲ, ಖಡ್ಗ, ನಾಗರಹಾವು, ಚಕ್ರಗಳನ್ನು ಹಿಡಿದಿದ್ದಾಳೆ. ಮಹಿಷಿಸುರ, ರಕ್ತಬೀಜನನ್ನು ಸಂಹಾರ ಮಾಡುವ ಕೆತ್ತನೆ ಇದೆ. ವರ್ಷಕ್ಕೆ ಒಮ್ಮೆ ಅಥವಾ ಐದು ವರ್ಷಕ್ಕೊಮ್ಮೆ ಜಾತ್ರೆ ನಡೆಯುವುದು ಸರ್ವೇಸಾಮಾನ್ಯವಾಗಿ ಕಾಣಬಹುದು. ಜಾತ್ರೆಯ ಸಂದರ್ಭದಲ್ಲಿ ದೇವಸ್ಥಾನದ ಮುಂದೆ ಪ್ರಾಣಿ ಬಲಿ ಕೊಡುವುದು, ವಿವಿಧ ಭಕ್ತಾಧಿಗಳ ಹರಕೆಗಳನ್ನು ತೀರಿಸುವುದು, ಚಿಕ್ಕ ಚಿಕ್ಕ ಮಕ್ಕಳಿಗೆ ಬೇವಿನ ಸೀರೆ ಊಡಿಸುವುದು ಇತ್ಯಾದಿ ಕಾರ್ಯಕ್ರಮಗಳು ನಡೆಯುವುದು. ಒಂದು ಸಂತೋಷದ ವಿಷಯ ಅಥವಾ ವಿಪರ್ಯಾಸವಾದ ವಿಷಯ ಎಂದು ಹೇಳಬಹುದು.

### ೪.೬. ಶಾಕ್ತ ಶಿಲ್ಪಗಳು

ಶಾಕ್ತ ಶಿಲ್ಪಗಳು ಎಂದರೆ ಸ್ತ್ರೀ ಶಿಲ್ಪಗಳು ಎಂಬರ್ಥದಲ್ಲಿ ಬಳಸಲಾಗುತ್ತದೆ. ಮಾತೃದೇವತೆಯ ರೂಪದಲ್ಲಿರುವ ಶಕ್ತಿ ದೇವತೆಯನ್ನು ಆರಾಧಿಸುವ ಪಂಥವನ್ನು ಶಾಕ್ತ ಶಿಲ್ಪಗಳೆಂದು ಸಹ ಕರೆಯುತ್ತಾರೆ. ಕ್ರಿಪೂ. ೨೦೦೦ ವರ್ಷಗಳ ಹಿಂದೆ ಹರಪ್ಪ ಸಂಸ್ಕೃತಿಯ ಕಾಲದಲ್ಲಿಯೇ ಮಾತೃದೇವತೆಗೆ ಸ್ಥಾನ ಕೊಟ್ಟಿರುವುದು ಸಹ ಕಂಡುಬರುತ್ತದೆ.[೨] ಇದನ್ನು ಇತಿಹಾಸವನ್ನು ಕೆದಕಿದಾಗ ಮಾತ್ರ ಅದರ ನೈಜತೆಯನ್ನು ಗೋಚರಿಸುತ್ತದೆ. ಇಂತಹ ಶಕ್ತಿ ದೇವತೆಗಳ ಶಿಲ್ಪಗಳಾದ ಪಾರ್ವತಿ, ಮಹಿಷಮರ್ದಿನಿ, ಕಾಳಿ, ಗಜಲಕ್ಷ್ಮೀ, ಚಾಮುಂಡಿ, ಸಪ್ತಮಾತೃದೇವತಾ ಆರಾಧನೆ ಹಿಂದಿನಿಂದಲೂ ಸಹ ಮುಂದುವರೆದುಕೊಂಡು ಬಂದಿದೆ.

ಸಂಖ್ಯೆ : ೧

ಶಿಲ್ಪ : ಕಾಳಿ

ಸ್ಥಳ : ಮಲ್ಲೇಶ್ವರ ದೇವಾಲಯದ ಮುಂಭಾಗ

ಗ್ರಾಮ : ಚಿಕ್ಕ ಮಧುರೆ

ಕಾಲ : ಕ್ರಿ.ಶ. ೧೩-೧೪ನೇ ಶತಮಾನ

ಚಳ್ಳಕೆರೆ ಕಸಬಾ ಹೋಬಳಿಯಲ್ಲಿ ಹಲವಾರು ದೇವಾಲಯಗಳಲ್ಲಿ ಈ ಶಾಕ್ತಶಿಲ್ಪಗಳು ಸಹ ಕಂಡುಬರುತ್ತವೆ. ಅವುಗಳಲ್ಲಿ ಚಿಕ್ಕ ಮಧುರೆ ಮಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿ ಕಾಳಿ ಶಿಲ್ಪ ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಸುಂದರವಾಗಿ ಕೆತ್ತಲಾಗಿದೆ. ಈ ದೇವಿಯು ಚತುರ್ಭುಜಧಾರಿಯಾಗಿದ್ದು ಕೈಗಳಲ್ಲಿ ಕತ್ತಿ, ಡಮರು, ಬೇಟಕ ಮತ್ತು ಕಪಾಲಗಳನ್ನು ಹಿಡಿದಿರುವಳು. ಬಲಗಾಲನ್ನು ಕೆಳಗೆ ಇಳಿ ಬಿಟ್ಟಿದ್ದಾಳೆ. ಎಡಗಾಲನ್ನು ಮಡಚಿಕೊಂಡು

ಕುಳಿತಿದ್ದಾಳೆ. ತಲೆಯಲ್ಲಿ ಕಿರೀಟವನ್ನು ಕಿವಿಗೆ ದಪ್ಪದಾದಂತಹ ಓಲೆಯನ್ನು ಧರಿಸಿ ಕೂದಲುಗಳನ್ನು ಭಜದವರೆಗೆ ಇಳಿಬಿಟ್ಟಿದ್ದಾಳೆ. ಕೊರಳಲ್ಲಿ ಕಂಠಹಾರ ಮತ್ತು ಸರವನ್ನು ಧರಿಸಿದ್ದಾಳೆ. ಸೊಂಟದಲ್ಲಿ ಪಟ್ಟಿಯಾಕಾರದ ಡಾಬನ್ನು ಧರಿಸಿ ಕೆಳವಸ್ತ್ರವನ್ನು ಕಾಲುಗಳಿಗೆ ಧರಿಸಿದ್ದಾಳೆ.

ಈ ಶಿಲ್ಪವನ್ನು ಗಮನಿಸಿದರೆ ಶಿಲ್ಪ ನಿರೂಪಣೆಯಲ್ಲಿ ಕ್ರಮಬದ್ಧತೆ ಸರಿಯಾಗಿ ಕಂಡುಬಂದಿಲ್ಲ ಎಂಬುದು ಸಹ ಕಾಣುತ್ತದೆ. ದೇಹದ ಕೆಲವು ಭಾಗದಲ್ಲಿ ಅಗಲವಾಗಿರುವಂತೆಯೂ, ಎತ್ತರ ಕುಬ್ಜವಾಗಿರುವಂತೆಯೂ ಕೈಕಾಲುಗಳನ್ನು ಅಗಲವಾಗಿ ಹರಡಿ ಕುಳಿತಂತೆ ರಚಿಸಲಾಗಿದೆ.

ಸಂಖ್ಯೆ : ೨

ಶಿಲ್ಪ : ಸಪ್ತಮಾತೃಕೆ

ಸ್ಥಳ : ಶ್ರೀ ಮಲ್ಲೇಶ್ವರ ದೇವಾಲಯದ ಮುಂಭಾಗ

ಗ್ರಾಮ : ಚಿಕ್ಕ ಮಧುರೆ

ಕಾಲ : ಕ್ರಿ.ಶ. ೯-೧೦ನೇ ಶತಮಾನ

ಇಂತಹ ಶಿಲ್ಪವನ್ನು ಸಪ್ತಮಾತೃಕಾ ಪಟ್ಟಿಗೆ ಎಂದು ಕರೆಯುತ್ತೇವೆ. ಇಲ್ಲಿ ಏಳು ದೇವತೆಯರು ಮತ್ತು ಅವರ ವಾಹನಗಳನ್ನು ಕೆತ್ತಿರುತ್ತಾರೆ. ಅವರ ವಾಹನ ಹಾಗೂ ಅವರುಗಳು ಹಿಡಿದಿರುವ ಆಯುಧಗಳ ಆಧಾರದ ಮೇಲೆ ಬ್ರಾಹ್ಮಿ, ಮಹೇಶ್ವರಿ, ಕಾಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಚಾಮುಂಡಾರನ್ನು ಕಾಣಲಾಗಿದ್ದು, ಇವರೆಲ್ಲಾ ಚತುರ್ಭುಜಧಾರಿಗಳು.

**ಬ್ರಾಹ್ಮಿ**

ಬ್ರಹ್ಮನ ಹೆಂಡತಿ ಇವಳ ವಾಹನ ಹಂಸ, ಹರಿಶಿಣ, ಸರಸ್ವತಿ ಎಂಬ ಹೆಸರುಗಳಿವೆ. ಚತುರ್ಮುಖಿಧಾರಿ ಮತ್ತು ಚತುರ್ಭುಜಧಾರಿಯಾಗಿದ್ದಾಳೆ. ಬಲಗಡೆಯ ಕೈಗಳಲ್ಲಿ ವರಮುದ್ರೆ, ಪಾಶವನ್ನು, ಎಡಗೈಗಳಲ್ಲಿ ಪುಸ್ತಕ ಮತ್ತು ಅಕ್ಷಮಾಲಗಳನ್ನು ಹಿಡಿದಿದ್ದಾಳೆ. ಕಿರೀಟವನ್ನು ಓಲೆಯನ್ನು ಕೊರಳಲ್ಲಿ ಸರವನ್ನು ಧರಿಸಿದ್ದಾಳೆ. ಸೊಂಟಪಟ್ಟಿಯನ್ನು ಧರಿಸಿ ಸೊಂಟದಿಂದ ಪಾದದವರೆಗೆ ಕೆಳವಸ್ತ್ರವನ್ನು ಧರಿಸಿದ್ದು ಕಾಲುಗಳಲ್ಲಿ ಕಡಗವನ್ನು ಧರಿಸಿ ಪೀಠದ ಮೇಲೆ ಕೂತಿದ್ದಾಳೆ. ಪೀಠದ ಕೆಳಗೆ ಹಂಸವನ್ನು ಕಾಣಬಹುದು.

**ಮಹೇಶ್ವರಿ**

ವೃಷಭ ಅಥವಾ ನಂದಿ ಇವಳ ವಾಹನ ಚತುರ್ಭುಜಧಾರಿಯಾಗಿದ್ದಾಳೆ. ಬಲಕೈಗಳಲ್ಲಿ ವರಮುದ್ರೆ ಶೂಲವನ್ನು ಎಡಕೈಗಳಲ್ಲಿ ಕಪಾಲ, ಡಮರುಗಳನ್ನು ಹಿಡಿದಿದ್ದಾಳೆ. ಕಿರೀಟ, ಕಿವಿಯಲ್ಲಿ ಓಲೆ, ಕಂಠಹಾರ ಹಾಗೂ ಸರವನ್ನು ಧರಿಸಿದ್ದಾಳೆ. ಕೈಗಳಲ್ಲಿ ತೋಳ್ಬಂಧ,

ಕೈಕಡಗವನ್ನು ಧರಿಸಿ ಸೊಂಟಪಟ್ಟಿಯನ್ನು ಕೆಳವಸ್ತ್ರವನ್ನು ಧರಿಸಿದ್ದಾಳೆ. ಕೆಳಗಡೆಯಲ್ಲಿ ನಂದಿವಾಹನ ಸಹ ಕಾಣಬಹುದು.

**ಕೌಮಾರಿ**

ಕೌಮಾರಿಯ ವಾಹನ ನವಿಲು ಅಥವಾ ಮಯೂರ, ಕಾರ್ತೀಕೇಯ ಸತಿ, ಚತುರ್ಭುಜಧಾರಿಯಾಗಿದ್ದು, ಬಲಕೈಗಳಲ್ಲಿ ವರಮುದ್ರೆ, ಬಾಣವನ್ನು, ಎಡಗೈಗಳಲ್ಲಿ ಕಪಾಲ, ಕಮಲವನ್ನು ಸಹ ಹಿಡಿದಿದ್ದಾಳೆ. ದೇವಿಯ ಕಿರೀಟ, ಓಲೆ, ಕಂಠಹಾರ, ಸರವನ್ನು ಧರಿಸಿದ್ದಾಳೆ. ದೇವಿಯು ತನ್ನ ಕೈಗಳಲ್ಲಿ ತೋಳಬಂಧಿಯನ್ನು ಕೈಬಳೆಯನ್ನು ಕಡಗವನ್ನು ಸೊಂಟಪಟ್ಟಿಯ ಸಹ ಧರಿಸಿದ್ದಾಳೆ. ಸೊಂಟದಿಂದ ಪಾದವರೆಗೆ ಕೆಳವಸ್ತ್ರವನ್ನು ಕಾಲುಗಳಿಗೆ ಕಡಗವನ್ನು ಧರಿಸಿ ಕೂತಿದ್ದಾಳೆ. ಕೆಳಗಡೆ ಅವಳ ವಾಹನ ಸಹ ಕಾಣಬಹುದು.

**ವೈಷ್ಣವಿ**

ಗರುಡ ವಾಹನವನ್ನು ಹೊಂದಿದ್ದಾಳೆ. ಇವಳು ಸಹ ಚತುರ್ಭುಜಧಾರಿಯಾಗಿದ್ದು, ಬಲಕೈಗಳಲ್ಲಿ ವರಮುದ್ರೆ, ಪದ್ಮವನ್ನು, ಎಡಕೈಗಳಲ್ಲಿ ಶಂಖ, ಚಕ್ರವನ್ನು ಹಿಡಿದಿದ್ದಾಳೆ. ಈ ದೇವಿಯು ಕಿರೀಟ, ಓಲೆಗಳನ್ನು ಕಂಠಾಭರಣಗಳನ್ನು ಧರಿಸಿದ್ದಾಳೆ. ಕೈಗಳಲ್ಲಿ ತೋಳ್ಬಂದಿ ಬಳೆಗಳನ್ನು ಧರಿಸಿದ್ದಾಳೆ. ಸೊಂಟಪಟ್ಟಿ ಮತ್ತು ಕೆಳವಸ್ತ್ರವನ್ನು ಕಾಲುಗಳಿಗೆ ಕಡಗಗಳನ್ನು ಧರಿಸಿ ಕೂತಿದ್ದಾಳೆ. ಕೆಳಗೆ ಅವಳ ವಾಹನ ಸಹ ಕಂಡುಬರುತ್ತದೆ.

**ವರಾಹಿ**

ಈಕೆಯ ವಾಹನ ವರಾಹ ಇವಳು ಕಪ್ಪನೆಯ ಶರೀರ ಕ್ರಾಂತಿಯಿಂದ ವರಾಹಿ ಮುಖದಿಂದ ದೊಡ್ಡ ಹೊಟ್ಟೆಯಿಂದ ಚತುರ್ಭಜಧಾರಿಯಾಗಿದ್ದಾಳೆ. ಬಲಕೈಗಳಲ್ಲಿ ವರಮುದ್ರೆ ದಂಡವನ್ನು ಎಡಕೈಯಲ್ಲಿ ಖಡ್ಗ, ಖೇಟಕವನ್ನು ಹಿಡಿದ್ದಾಳೆ. ಕಿರೀಟವನ್ನು ಓಲೆಗಳನ್ನು ಕಂಠಹಾರ ಕೊರಳ ಸರವನ್ನು ಕೈಗಳಲ್ಲಿ ತೋಳ್ಬಂದಿ, ಕಡಗವನ್ನು ಧರಿಸಿದ್ದಾಳೆ. ಸೊಂಟಪಟ್ಟಿಯನ್ನು ಕೆಳವಸ್ತ್ರವನ್ನು ಧರಿಸಿ ಕೂತಿದ್ದಾಳೆ. ಈ ದೇವಿಯ ಕೆಳಗೆ ಅವಳ ವಾಹನ ಸಹ ಕಾಣಬಹುದು.

**ಇಂದ್ರಾಣಿ-ಐಂದ್ರಿ**

ಐದ್ರಾಣಿಯ ವಾಹನ ಗಜ. ಈ ದೇವಿಯು ಚತುರ್ಭುಜಧಾರಿಯಾಗಿದ್ದು ಬಲಕೈಗಳಲ್ಲಿ ವರಮುದ್ರೆ ವಜ್ರಗಳನ್ನು ಎಡಕೈಗಳಲ್ಲಿ ಕಪಾಲ ಮತ್ತು ಮುದ್ರೆಯನ್ನು ಹಿಡಿದಿದ್ದಾಳೆ. ಕಿರೀಟವನ್ನು ಕಿವಿಯೋಲೆ, ಕೊರಳ ಸರವನ್ನು, ಕೈಗಳಲ್ಲಿ ತೋಳ್ಬಂದಿ ಭುಜದಿಂದ ಸೊಂಟಪಟ್ಟಿಯನ್ನು ಕೆಳವಸ್ತ್ರವನ್ನು ಕಾಲಿನಲ್ಲಿ ಕಡಗವನ್ನು ಧರಿಸಿದ್ದಾಳೆ. ದೇವಿಯ ಕೆಳಗೆ ಅವಳ ವಾಹನ ಆನೆಯನ್ನು ಸಹ ಕಾಣಬಹುದು.

**ಚಾಮುಂಡಿ**

ಇವಳ ವಾಹನ ಸಿಂಹ. ಈ ದೇವಿಯು ಸಹ ಚತುರ್ಭುಜಧಾರಿ ಯಾಗಿದ್ದು ಬಲಕೈಗಳಲ್ಲಿ ಖಡ್ಗ, ಚಕ್ರವನ್ನು ಎಡಕೈಗಳಲ್ಲಿ ತ್ರಿಶೂಲ, ಡಮರುಗಳನ್ನು ಹಿಡಿದಿದ್ದಾಳೆ. ಕಿರೀಟವನ್ನು ಕಿವಿಯೋಲೆ, ಕೊರಳಲ್ಲಿ ಸರಗಳನ್ನು ಧರಿಸಿದ್ದಾಳೆ. ಕೈಗಳಲ್ಲಿ ಬಳೆಗಳನ್ನು ಕಡಗವನ್ನು ಧರಿಸಿದ್ದಾಳೆ. ಸೊಂಟದಲ್ಲಿ ಸೊಂಟಪಟ್ಟಿಕೆಯನ್ನು ಕೆಳವಸ್ತ್ರವನ್ನು ಧರಿಸಿದ್ದಾಳೆ. ಅವಳ ವಾಹನವನ್ನು ಪೀಠದಲ್ಲಿ ಕಾಣಬಹುದು. ಈ ರೀತಿಯಾಗಿ ಸಪ್ತಮಾತೃಕೆಯನ್ನು ಒಂದೇ ಪೀಠದಲ್ಲಿ ಕೆತ್ತಿರುತ್ತಾರೆ. ಈ ಶಿಲ್ಪಗಳೆಲ್ಲವೂ ಒಂದೇ ಭಂಗಿಯಲ್ಲಿ ಕುಳಿತುಕೊಂಡಿವೆ. ಶಿಲ್ಪಟ್ಟಿಕೆಯನ್ನು ಗಮನಿಸಿದರೆ ಶಿಲ್ಪಗಳು ನೈಜವಾಗಿ ಮೂಡಿಬಂದಿವೆ.

ಸಂಖ್ಯೆ : ೩

ಶಿಲ್ಪ : ಮಹಿಷಮರ್ದಿನಿ

ಸ್ಥಳ : ಮಲ್ಲೇಶ್ವರ ದೇವಾಲಯದ ಮುಂಭಾಗ

ಗ್ರಾಮ : ಚಿಕ್ಕಮಧುರೆ

ಕಾಲ : ಕ್ರಿ.ಶ. ೧೨-೧೩ನೇ ಶತಮಾನ

ಮಹಿಷಮರ್ದಿನಿ ಶಿಲ್ಪವು ಕಪ್ಪು ಗ್ರಾನೈಟ್‌ನಲ್ಲಿದೆ. ಮಹಿಷಾಮರ್ಧಿನಿಯ ಚತುರ್ಭುಜಧಾರಿ ಯಾಗಿದ್ದು ಬಲಗಡೆಯ ಮೊದಲ ಕೈಯಲ್ಲಿ ತ್ರಿಶೂಲವನ್ನು ಹಿಡಿದು ಕೋಣದ ಕುತ್ತಿಗೆಗೆ ತಿವಿದಿದ್ದಾಳೆ. ಇನ್ನೊಂದು ಕೈಯಲ್ಲಿ ಶಂಖವನ್ನು ಹಿಡಿದುಕೊಂಡಿದ್ದಾಳೆ. ತನ್ನ ಬಲಗಾಲವನ್ನು ಕೋಣದ ಬೆನ್ನಿನ ಮೇಲೆ ಇಟ್ಟಿದ್ದಾಳೆ. ಇನ್ನೊಂದು ಕಾಲನ್ನು ಕೋಣದ ಮುಂದೆ ಇಟ್ಟಿದ್ದಾಳೆ. ದೇವಿಯು ಕಿರೀಟವನ್ನು ಕಿವಿಯಲ್ಲಿ ಓಲೆಯನ್ನು ಕೊರಳಲ್ಲಿ ಅಗಲವಾದಂತಹ ಕಂಠಹಾರವನ್ನು ಧರಿಸಿದ್ದಾಳೆ. ಮೇಲುಗಡೆಯನ್ನು ಧರಿಸಿದ್ದಾಳೆ. ಸೊಂಟದಿಂದ ಪಾದದವರೆಗೆ ಕೆಳವಸ್ತ್ರವನ್ನು ಕಾಲುಗಳಿಗೆ ಕಡಗವನ್ನು ಧರಿಸಿದ್ದಾಳೆ. ದೇವಿಯ ಬಲಕ್ಕೆ ರಾಕ್ಷಸ ತಲೆಯನ್ನು ಕಾಣುತ್ತೇವೆ. ಇಲ್ಲಿ ಕೋಣ ನಿಂತಿದೆ. ಕೋಣದ ಕಾಲುಗಳಿಗೆ ಕಡಗವನ್ನು ಧರಿಸಿರುವುದು ಕಾಣಬಹುದು.

ಸಂಖ್ಯೆ : ೪

ಶಿಲ್ಪ : ಪಾರ್ವತಿ

ಸ್ಥಳ : ಶ್ರೀ ವೀರಭದ್ರಸ್ವಾಮಿ ದೇವಾಲಯದ ಮುಖಮಂಟಪ

ಗ್ರಾಮ : ದೊಡ್ಡೇರಿ

ಕಾಲ : ಕ್ರಿ.ಶ. ೧೭–೧೮ನೇ ಶತಮಾನ

ಪಾರ್ವತಿ ಶಿಲ್ಪವು ಕಪ್ಪುಶಿಲೆಯಲ್ಲಿ ಕೆತ್ತಲಾಗಿದೆ. ಪಾರ್ವತಿಯು ದ್ವಿಭುಜಾಧಾರಿಯಾಗಿದ್ದು, ಬಲಗೆಯಲ್ಲಿ ಕತ್ತಿ ಎಡಗೈಯಲ್ಲಿ ಕಪಾಲವನ್ನು ಹಿಡಿದಿದ್ದಾಳೆ. ಪಾರ್ವತಿಯ ಬಲಗಾಲನ್ನು

ಕೆಳಗೆ ಇಳಿಬಿಟ್ಟಿದ್ದಾಳೆ. ಎಡಗಾಲನ್ನು ಮಡಚಿಕೊಂಡು ಪೀಠದ ಮೇಲೆ ಕುಳಿತಿದ್ದಾಳೆ. ತಲೆಯಲ್ಲಿ ಕಿರೀಟ, ಕಿವಿಯೋಲೆ, ಕೊರಳಿಗೆ ಕಂಠಹಾರ ಮತ್ತು ದಪ್ಪನೆಯ ಸರವನ್ನು ಕೊರಳದಿಂದ ಎದೆಯ ಭಾಗದವರೆಗೆ ಧರಿಸಿದ್ದಾಳೆ. ಸೊಂಟದಿಂದ ಪಾದದವರೆಗೆ ನೆರಿಗೆಯಾಕಾರದ ಕೆಳವಸ್ತ್ರವನ್ನು ಕಾಲುಗಳಿಗೆ ಕಡಗವನ್ನು ಧರಿಸಿದ್ದಾಳೆ.

ಸಂಖ್ಯೆ : ೫

ಶಿಲ್ಪ : ಮಹಿಷಮರ್ದಿನಿ

ಸ್ಥಳ : ದೊಡ್ಡೇರಿ

ಗ್ರಾಮ : ದೊಡ್ಡೇರಿ

ಕಾಲ : ೧೪-೧೫ನೇ ಶತಮಾನ

ಮಹಿಷಮರ್ದಿನಿ ಶಿಲ್ಪವು ಕಪ್ಪು ಗ್ರಾನೈಟ್‌ನಿಂದ ಕೆತ್ತಲಾಗಿದೆ. ದೇವಿಯು ತನ್ನ ಎಡಭಾಗದ ಮೊದಲ ಕೈಯನ್ನು ಸೊಂಟಕ್ಕೆ ಇಟ್ಟುಕೊಂಡಿದ್ದಾಳೆ. ಇನ್ನೊಂದು ಕೈಯಲ್ಲಿ ಮುಖವನ್ನು ಹಿಡಿದಿದ್ದಾಳೆ. ಕಿರೀಟವನ್ನು ಓಲೆಯನ್ನು ಕಿರೀಟದ ಹಿಂದೆ ಪ್ರಭಾವಳಿಯನ್ನು ಕಾಣುತ್ತದೆ. ದೇವಿಯು ಕೂದಲುಗಳನ್ನು ಭುಜದ ಮೇಲೆ ಇಳಿಬಿಟ್ಟಿದ್ದಾಳೆ. ಕೊರಳಲ್ಲಿ ಸರವನ್ನು ಕೈಗಳಲ್ಲಿ ತೋಳ್ಬಂದಿ, ಬಳೆಗಳು ಧರಿಸಿದ್ದಾಳೆ. ಸೊಂಟದಿಂದ ಪಾದದವರೆಗೆ ನೆರಿಗೆಯಾಕಾರದ ವಸ್ತ್ರವನ್ನು ಧರಿಸಿದ್ದಾಳೆ. ಶಿಲ್ಪವು ಭಗ್ನಗೊಂಡಿದೆ.

ಸಂಖ್ಯೆ : ೬

ಶಿಲ್ಪ : ಗಜಲಕ್ಷ್ಮಿ

ಸ್ಥಳ : ಶ್ರೀಮಲ್ಲೇಶ್ವರ ದೇವಾಲಯದ ಮುಂಭಾಗ

ಗ್ರಾಮ : ಚಿಕ್ಕಮಧುರೆ

ಕಾಲ : ೧೩-೧೪ನೇ ಶತಮಾನ

ಈ ಶಿಲ್ಪವು ನೈಸರ್ಗಿಕ ವಿಕೋಪದಿಂದ ಭಗ್ನಗೊಂಡಿದ್ದು ಇದನ್ನು ಗಜಲಕ್ಷ್ಮಿ ಎಂದು ಹೇಳಬಹುದು. ಈ ದೇವಿಯು ದ್ವಿಭುಜಾಧಾರಿಯಾಗಿದ್ದು, ಕಮಲದ ಹೂಗಳನ್ನು ಹಿಡಿದಿದ್ದಾಳೆ. ಕಿರೀಟವನ್ನು ಓಲೆಯನ್ನು ಕಂಠಹಾರ ಮತ್ತು ಕೊರಳ ಸರಗಳನ್ನು ಧರಿಸಿದ್ದಾಳೆ. ಭುಜಬಂಧಿ, ತೋಳ್ಬಂದಿ ಹಾಗೂ ಕೈಗಳಲ್ಲಿ ಬಳೆಗಳನ್ನು ಧರಿಸಿದ್ದಾಳೆ. ಸೊಂಟದಿಂದ ಪಾದದವರೆಗೆ ವಸ್ತ್ರವನ್ನು ಧರಿಸಿದ್ದಾಳೆ. ಲಕ್ಷ್ಮಿಯ ಬದಿಗಳಲ್ಲಿ ಗಜಗಳು ಇರುವುದರಿಂದ ಗಜಲಕ್ಷ್ಮಿ ಎಂದು ಗಜಗಳು ಲಕ್ಷ್ಮಿಗೆ ಜಲಾಭಿಷೇಕ ಮಾಡುತ್ತಿರುವುದರಿಂದ ಅಭಿಷೇಕ ಲಕ್ಷ್ಮಿ ಎಂದು ಸಹ ಕರೆಯಲಾಗಿದೆ.

ಸಂಖ್ಯೆ : ೭

ಶಿಲ್ಪ : ದುರ್ಗಾಂಬಿಕಾ

ಸ್ಥಳ : ದೊಡ್ಡೇರಿ

ಕಾಲ : ಕ್ರಿ.ಶ.ಸು. ೧೯೦೦

ಆದಿಶಕ್ತಿ ಎಂದು ಕರೆಯಲಾಗಿರುವ ಶಕ್ತಿ ದೇವತೆಗಳಲ್ಲಿ ದುರ್ಗಿಯು ಪ್ರಮುಖ ಸ್ಥಾನ ಪಡೆದಿದ್ದಾಳೆ. ದೊಡ್ಡೇರಿ ಗ್ರಾಮದಲ್ಲಿರುವ ದುರ್ಗಮ್ಮನ ದೇವಾಲಯದಲ್ಲಿ ಈ ಮೂರ್ತಿಶಿಲ್ಪವಿದೆ. ದುರ್ಗಿಯ ಹಿಂಬದಿಯಲ್ಲಿ ಈ ದೇವತೆಯು ರುದ್ರವತಾರದ ಸ್ವರೂಪದ ಹಲಗೆಯಿದ್ದು, ಕೈಯಲ್ಲಿ ತ್ರಿಶೂಲ, ಮತ್ತೊಂದು ಕೈಯಲ್ಲಿ ಕತ್ತಿಯನ್ನು ಮತ್ತು ಕುಂಕುಮದ ಬಟ್ಟಲನ್ನು ಕಾಣಬಹುದಾಗಿದೆ ಹಾಗೂ ಕೊರಳಲ್ಲಿ ಹಾರವನ್ನು ಕಾಲುಗಳಲ್ಲಿ ಕಡಗವನ್ನು ಮತ್ತು ಶಿರದಲ್ಲಿ ಕಿರೀಟವನ್ನು ಧರಿಸಿದ್ದು ತುಂಬಾ ಸುಂದರವಾದ ಮೂರ್ತಿಶಿಲ್ಪ ಇದಾಗಿದೆ.

ಸಂಖ್ಯೆ : ೮

ಶಿಲ್ಪ : ಮಾರಕ್ಕ

ಸ್ಥಳ : ಮೀರಾಸಾಬಿಹಳ್ಳಿ

ಕಾಲ : ಕ್ರಿ.ಶ.ಸು. ೧೯೫೦

ಗ್ರಾಮಶಕ್ತಿ ಎಂದು ಕರೆಯಲಾಗಿರುವ ಶಕ್ತಿದೇವತೆಗಳಲ್ಲಿ ಮಾರಕ್ಕವು ಪ್ರಮುಖ ಸ್ಥಾನ ಪಡೆದಿದ್ದಾಳೆ. ಮೀರಾಸಾಬಿಹಳ್ಳಿ ಗ್ರಾಮದಲ್ಲಿರುವ ಮಾರಕ್ಕನ ದೇವಾಲಯದಲ್ಲಿ ಈ ಮೂರ್ತಿ ಸಹ ಕಂಡುಬರುತ್ತದೆ. ಈ ದೇವತೆಯು ತನ್ನ ಕೈಗಳಲ್ಲಿ ತ್ರಿಶೂಲ, ಗದೆ, ಶಂಖ, ಖಡ್ಗ, ಕುಂಕಮದ ಬಟ್ಟಲನ್ನು ಹಿಡಿದಿದ್ದಾಳೆ. ಕಾಲುಗಳಲ್ಲಿ ಕಡಗವನ್ನು ಮತ್ತು ಶಿರದಲ್ಲಿ ಕಿರೀಟವನ್ನು ಧರಿಸಿದ್ದ ತುಂಬಾ ಸುಂದರವಾದ ಮೂರ್ತಿಶಿಲ್ಪ ಇದಾಗಿದೆ.

ಸಂಖ್ಯೆ : ೯

ಶಿಲ್ಪ : ಸಪ್ತಮಾತೃಕೆಯರು

ಸ್ಥಳ : ದೊಡ್ಡೇರಿ ಕೆರೆಯ ಏರಿ ಮೇಲೆ

ಗ್ರಾಮ : ದೊಡ್ಡೇರಿ

ಕಾಲ : ಕ್ರಿ.ಶ.ಸು. ೧೯ನೇ ಶತಮಾನ

ಈ ಶಿಲ್ಪವನ್ನು ಸಪ್ತಮಾತೃಕೆಯರ ಶಿಲ್ಪಫಲಕ ಎಂದು ಕರೆಯುತ್ತೇವೆ. ಇಲ್ಲಿ ಏಳುದೇವತೆಗಳು ಮತ್ತು ಅವರ ವಾಹನಗಳನ್ನು ಕೆತ್ತಿರುತ್ತಾರೆ. ಬ್ರಾಹ್ಮೀ, ಮಹೇಶ್ವರಿ, ಕೌಮಾರಿ, ವೈಷ್ಣವಿ,

ವರಾಹಿ, ಇಂದ್ರಾಣಿ, ಚಾಮುಂಡಿಯರನ್ನು ಕಾಣಲಾಗಿದ್ದು, ಇವರೆಲ್ಲಾ ಚತುರ್ಭುಜಧಾರಿಗಳಾಗಿದ್ದಾರೆ.

ಸಂಖ್ಯೆ : ೧೦

ಶಿಲ್ಪ : ಚಳ್ಳಕೇರಮ್ಮ ಶಿಲ್ಪ

ಸ್ಥಳ : ಚಳ್ಳಕೆರೆಯ ಮಧ್ಯ

ಕಾಲ : ಕ್ರಿ.ಶ. ೧೭-೧೮ನೇ ಶತಮಾನ

ಚಳ್ಳಕೆರೆ ನಗರದಲ್ಲಿ ನೆಲೆಸಿರುವ ಚಳ್ಳಕೇರಮ್ಮ ಮೂಲ ಮೂರ್ತಿ ಕೇವಲ ಒಂದು ಸ್ತ್ರೀ ರುಂಡವಿರುವ ಮೂರ್ತಿ ಆಗಿದೆ. ಇದರ ಪಕ್ಕದಲ್ಲೇ ನಾಗರ ಹೆಡೆಯ ಪ್ರಭಾವಳಿ ಹೊಂದಿರುವ ರುಂಡವಿರುವ ಮೂರ್ತಿ ಮತ್ತೊಂದು ಸ್ತ್ರೀಯ ವಿಗ್ರಹವಿದೆ. ದೇವಾಲಯದ ಹೊರ ಕವಚದಲ್ಲಿ ಸಿಂಹ, ಸರ್ಪ ನುಂಗುತ್ತಿರುವ ಸಿಂಹ, ಹುಲಿ ಸವಾರಿ ಮಾಡುತ್ತಿರುವ ನರಸಿಂಹ, ಎರಡು ದೇಹ ಒಂದು ತಲೆ ಸಿಂಹ, ಚತುರ್ಮುಖ ನಂದಿ, ಮೃದಂಗ ಬಾರಿಸುತ್ತಿರುವ ಕಲಾವಿದ ಇಂತಹ ಅಪರೂಪದ ಶಿಲ್ಪಗಳು ಈ ದೇವಾಲಯದಲ್ಲಿ ಕಂಡುಬರುತ್ತದೆ.

**೪.೭. ಗ್ರಾಮದೇವತೆಗಳು**

ಹಳ್ಳಿ, ಪಳ್ಳಿ, ಊರು, ಗುಡಾ, ಗಾಂವ್, ಕಸಬಾ, ಬೇಡಾ ಎಂದು ಭಾರತದ ಬೇರೆ ಬೇರೆ ಕಡೆಗಳಲ್ಲಿ ಪರಿಚಿತವಾಗಿರುವ ಸಮುದಾಯಿಕ ಜೀವನ ನಡೆಸುವ ಸಣ್ಣ ಜನವಸತಿ ಪ್ರದೇಶಗಳೇ ಗ್ರಾಮಗಳು.

ಗ್ರಾಮದ ಅಧಿಷ್ಠಾತ್ರಿ, ದೈವ. ಈ ದೈವವನ್ನು ಪೂಜಿಸಲು ಪ್ರಾರಂಭ ಮಾಡಿದುದರಿಂದ ಇದಕ್ಕೆ ಗ್ರಾಮದೇವತೆಯೆಂದು ಹೆಸರಾಯಿತು. ಭಾರತದಲ್ಲಿ ಸಾಮಾನ್ಯವಾಗಿ ಪ್ರತಿಯೊಂದು ಗ್ರಾಮಕ್ಕೂ, ಒಂದು ಗ್ರಾಮ ದೇವತೆಯೂ ದೇವಸ್ಥಾನವೂ ಇವೆ. ಹಳ್ಳಿಗಳು ಅತಿ ಚಿಕ್ಕವೂ ಹತ್ತಿರದಲ್ಲಿರುವವೂ ಆದಾಗ, ಎರಡು ಮೂರು ಹಳ್ಳಿಗಳಿಗೆ ಮಧ್ಯಸ್ಥವಾಗಿ ಎಲ್ಲರಿಗೂ ಹತ್ತಿರವಾಗುವ ಸ್ಥಳದಲ್ಲಿ ಒಂದು ಗ್ರಾಮದೇವತೆಯ ದೇವಾಲಯ ಸ್ಥಾಪಿತವಾಗಿರುತ್ತವೆ. ನೂರಕ್ಕೆ ತೊಂಬತ್ತೊಂಬತ್ತು ದೇವಾಲಯಗಳೂ ಊರ ಹೊರಗಿರುತ್ತವೆ.

ಈ ದೇವಾಲಯಗಳು ಸ್ಥಾಪಿತವಾದ ಕಾಲ ಯಾವುದು ಎಂಬುದಕ್ಕೆ ಐತಿಹಾಸಿಕ ಆಧಾರಗಳು ದೊರೆತಿರುವುದು ಅತಿ ಸ್ವಲ್ಪ. ಆದರೆ ಜನಪದದಲ್ಲಿ ರೂಢಿಯಲ್ಲಿರುವ ಮತ್ತು ಕೆಲವು ಗ್ರಾಮದೇವತೆಗಳ ದೇವಾಲಯಗಳನ್ನು ಕುರಿತ ಐತಿಹ್ಯಗಳಿಂದ ಸಂಗ್ರಹಿತವಾದ ಅಂಶಗಳು ಹೀಗಿವೆ: ಆದಿ ಮಾನವನಿಗೆ ತಾನು ಕಂಡ ಜಗತ್ತಿನ ಬಗ್ಗೆ ಒಂದು ಬಗೆಯ ವಿಸ್ಮಯವೂ ಭಯವೂ ಮೊದಲು ಉಂಟಾಗಿರಬೇಕು. ಕ್ರಮೇಣ ಅವನು ಅಂಥ ಸೃಷ್ಟಿ ವೈಚಿತ್ರ್ಯಕ್ಕೆ ಕಾರಣಕರ್ತನಾದ ದೈವ ಹೊಂದಿರಬೇಕು ಎಂಬ ಭಾವನೆಯನ್ನು ಬೆಳೆಸಿಕೊಂಡನೆಂದು

ಕಾಣುತ್ತದೆ. ಗ್ರಾಮದೇವತೆ ಮತ್ತು ಇತರ ಉಪದೇವತೆಗಳ ಕಲ್ಪನೆ ಆನಂತರ ಮೂಡಿದ್ದು, ದೇವರು ಪ್ರಪಂಚಕ್ಕೆಲ್ಲ ಹೊಣೆಗಾರ; ಅವನಿಗೆ ಕೈತುಂಬ ಕೆಲಸವಾದ್ದರಿಂದ ಆತ ಯಾವ ಕಡೆ ಅಂತ ನೋಡುತ್ತದೆ? ತಮ್ಮ ಕಡೆ ಗಮನಿಸುವುದಕ್ಕೆ ಅವನಿಗೆ ಹೊತ್ತು ಎಲ್ಲಿದೆ? ಆದ್ದರಿಂದ ತಾವು ದೇವರಿಗೂ ತಮಗೂ ನಡುವೆ ಒಬ್ಬ ವಾದ್ಯಸ್ಥನನ್ನು(ಸಣ್ಣ ದೇವರನ್ನು) ಏರ್ಪಡಿಸಿಕೊಂಡು ಅವನನ್ನು ತೃಪ್ತಿಪಡಿಸಿ, ಅವನ ಮೂಲಕ ಜಗತ್‌ಕರ್ತನನ್ನು ಒಲಿಸಿಕೊಳ್ಳುವುದು ಸುಲಭ ಎಂಬ ಭಾವನೆ ಬಲಿತಂತೆಲ್ಲ ಊರಿಗೊಂದು ಗ್ರಾಮದೇವತೆ ಸೃಷ್ಟಿಯಾಗಿರಬೇಕು.

ಗ್ರಾಮ ಘಟಕಗಳು ಪ್ರಾರಂಭವಾದಂದಿನಿಂದಲೇ ಗ್ರಾಮದೇವತೆಯೂ ಅಸ್ತಿತ್ವಕ್ಕೆ ಬಂದು ಎಂದು ಹೇಳಬಹುದು. ಆದ್ದರಿಂದ ಗ್ರಾಮದೇವತೆಯ ಕಲ್ಪನೆ ಅತ್ಯಂತ ಪ್ರಾಚೀನ ಕಾಲಕ್ಕೆ ಅಂದರೆ ಆರ್ಯರು, ಅನಾರ್ಯರು, ಉಪನಿಷತ್ತು, ವೇದ, ಎಲ್ಲವುಗಳ ಹಿಂದಲ ಕಾಲಕ್ಕೆ ಸೇರಿದುದೆಂದು ಹೇಳಬಹುದು. ರಾಮಾಯಣ ಕಾಲಕ್ಕೂ, ಹಿಂದಿನಿಂದಲೇ ಈ ದೇವತೆ ಇದ್ದಿರಬೇಕು. ಸೀತೆ ಗಂಗೆಯನ್ನು ದಾಟುವಾಗ ಗಂಗೆಯನ್ನು ಹೀಗೆ ಪ್ರಾರ್ಥಿಸುತ್ತಾಳೆ : 'ನಿನ್ನ ತೀರದಲ್ಲಿರುವ ದೇವತೆಗಳಿಗೆ ಅನೇಕ ನೈವೇದ್ಯಗಳನ್ನು ಮಾಡಿಸುವೆನು. ನಿನಗೆ, ಸಂತೋಷವಾಗುವ ಮರ್ಯಾದೆಯಲ್ಲಿ ಸಾವಿರ ಸುರಾ ಘಟಗಳನ್ನೂ, ಅನೇಕ ಮಾಂಸೋಪಹಾರಗಳನ್ನು ಬಲಿಯಾಗಿ ಕೊಡುವೆನು'. ಸೀತೆ ಹೇಳಿರುವ ದೇವತೆಗಳು ಗಂಗಾ ತೀರದ ಗ್ರಾಮದೇವತೆಗಳೆಂದು ಊಹಿಸಲು ಅವಕಾಶವಿದೆ.[೨೧]

ಹಳ್ಳಿಯ ರೈತರು ವಿವಾಹಗಳಲ್ಲಿ ಗ್ರಾಮದೇವತೆಗಳಿಗೆ ಮೊದಲ ವೀಳ್ಯ ಎತ್ತುತ್ತಾರೆ. ಈ ವೀಳ್ಯ ಎಂಬುದನ್ನು ಸಹ ಆರ್ಯರು ದ್ರಾವಿಡರಿಂದ ಅಂಗೀಕರಿಸಿದುದ್ದರಿಂದ, ಗ್ರಾಮದೇವತೆಯ ಮೂಲ ತುಂಬಾ ಪ್ರಾಚೀನ ಕಾಲಕ್ಕೆ ಹೋಗುತ್ತದೆಂಬುದರಲ್ಲಿ ಸಂದೇಹವಿಲ್ಲ. ಅನಂತರದ ವರ್ಷಗಳಲ್ಲಿ ಇದು ಎಷ್ಟರಮಟ್ಟಿಗೆ ಗ್ರಾಮದ ಅವಿಭಾಜ್ಯ ಅಂಗವಾಯಿತೆಂದರೆ, ಸರ್ಕಾರದವರು ಪ್ರತಿಯೊಂದು ಗ್ರಾಮಕ್ಕೂ ಗ್ರಾಮದೇವತೆಗೂ ಉಂಬಳ ಜಮೀನನ್ನು ಕಡ್ಡಾಯವಾಗಿ ಬಿಟ್ಟು ಅದನ್ನು ಗ್ರಾಮದ ಬಾರಾಬಲೂಡಿ ಲೆಕ್ಕದಲ್ಲಿ ಸೇರಿಸಿದ್ದಾರೆ. ಹೀಗೆ ಪ್ರಾಚೀನ ಕಾಲದಿಂದ ಹಿಡಿದು ಅರ್ವಾಚೀನ ಕಾಲದವರೆಗೆ ಗ್ರಾಮದೇವತೆ ಜನಪದ ಜೀವನದಲ್ಲಿ ಅವಿಭಾಜ್ಯವಾಗಿ ಸೇರಿಕೊಂಡು ಬಂದಿದೆ.

ಜನತೆಯ ದೃಷ್ಟಿಯಲ್ಲಿ ಗ್ರಾಮದೇವತೆಯ ಮಟ್ಟ ಅತಿ ಹೆಚ್ಚಿನದೂ ಅಲ್ಲ, ಅತಿ ಕಡಿಮೆಯಾದೂ ಅಲ್ಲ. ಅದರ ಕಾರ್ಯ ಪ್ರಭಾವ, ದೃಷ್ಟಿ ಒಂದು ಗ್ರಾಮಕ್ಕೆ ಮಾತ್ರ ಸೀಮಿತವಾದದ್ದು. ಅಂದರೆ ಈ ಗ್ರಾಮದ ಹಿತರಕ್ಷಣೆಗಂತೂ ಗ್ರಾಮದೇವತೆಯೇ ಸಾರ್ವಭೌಮ. ಗ್ರಾಮದಲ್ಲಿ ಯಾರೊಬ್ಬರೂ ಅದರ ಪ್ರಭಾವದಿಂದ ಹೊರಗಾಗಲು ಸಾಧ್ಯವೂ ಇಲ್ಲ, ಅವಕಾಶವೂ ಇಲ್ಲ. ಗ್ರಾಮಕ್ಕೆ ಯಾವ ಶುಭ ದೊರಬೇಕಾದರೂ ಅದನ್ನು ಉಂಟುಮಾಡುವುದು, ಯಾವ ಅಪಾಯ ಒದಗಿದರೂ ಅದನ್ನು ತಪ್ಪಿಸುವುದು ಗ್ರಾಮದೇವತೆಯ ಹೊಣೆಗಾರಿಕೆ. ರೈತನ

ಮನೆಯಲ್ಲಿ ಯಾರಿಗೋ ರೋಗ ಬರುತ್ತದೆ. ಎಮ್ಮೆ ಉಚ್ಚುತ್ತದೆ, ಹಾಲು ಕೊಡುವುದಿಲ್ಲ, ಗೊಬ್ಬರ ಎಷ್ಟೋ ಹಾಕಿದರೂ ಹೊಲಗದ್ದೆಗಳಲ್ಲಿ ಪೈರು ನೆರೆಯ ಜಮೀನಿನಲ್ಲಿರುವಷ್ಟು ಫಲವತ್ತಾಗುವುದಿಲ್ಲ. ಆಗ ರೈತ ಗ್ರಾಮದೇವತೆಗೆ ಒಂದು ಹರಕ್ಕೆ ಹೊರುತ್ತಾನೆ. ಕಾರ್ಯ ದೊಡ್ಡದಾಗಿದ್ದರೆ, ಅಂದರೆ ಮನೆಯ ಯಜಮಾನನಿಗೆ ಗುಣವಾಗದ ರೋಗ ಬಂದಿದ್ದರೆ, ಇಲ್ಲವೆ ದೊಡ್ಡ ಜಮೀನಿನ ವ್ಯಾಪಾರ ಕುದುಕಬೇಕಾದರೆ ಇಲ್ಲವೆ ಕೋರ್ಟು ವ್ಯಾಜ್ಯ ಗೆಲ್ಲಬೇಕಾದರೆ, ಆತ ಗ್ರಾಮದೇವಿಗೆ ತೋರಿಸುವ ಬಲಿಯ ಆಸೆ ಕೋಳಿಯಿಂದ ಕುರಿಯವರೆಗೆ ಹೋಗುತ್ತದೆ. ಹೀಗೆ ಪ್ರತಿಯೊಬ್ಬರೂ ತಮ್ಮ ಕಷ್ಟಗಳಿಗಾಗಿ ಗ್ರಾಮದೇವತೆಯನ್ನು ಮೊರೆ ಹೋಗಲೇಬೇಕು.[೨]

ಗ್ರಾಮದೇವತೆ ಸರಿಯಾಗಿ ತನ್ನ ಕರ್ತವ್ಯವನ್ನು ಮಾಡಿ, ರೈತನಿಗೆ ಸಂತೃಪ್ತಿಯನ್ನುಂಟು ಮಾಡದಿದ್ದರೆ ರೈತ ದೇವತೆಯನ್ನು ಸುಮ್ಮನೆ ಬಿಡುವುದಿಲ್ಲ. ಸಾಧಾರಣವಾಗಿ ಪ್ರತಿಗ್ರಾಮದವರೂ ತಮ್ಮ ಗ್ರಾಮದೇವತೆಗೆ ಹರಕೆ ಮಾಡಿಕೊಳ್ಳುವುದು ವಾಡಿಕೆ. ಆ ವಿಷಯದಲ್ಲಿ ಗ್ರಾಮದೇವರದು ಬಹುಮಟ್ಟಿಗೆ ಕಟ್ಟುನಿಟ್ಟು. ಗ್ರಾಮದೇವತೆ, ಒಂದು ಗ್ರಾಮಕ್ಕೆ ಸೇರಿದ್ದರಿಂದ, ಅದರ ಅನುಗ್ರಹ ಆ ಗ್ರಾಮದವರಿಗೇ ಮೀಸಲು, ಗ್ರಾಮದವರೂ, ಅವಳನ್ನೇ ನಂಬಿ ಸರ್ವಕ್ಕೂ ಅವಳನ್ನೇ ಯಾಚಿಸಿ ಪಡೆಯಬೇಕೆಂದು ಸಾಮಾನ್ಯ ನಿಯಮ.

ಗ್ರಾಮದೇವತೆಯಷ್ಟೇ ಅದರ ಪೂಜಾರಿಯೂ ಆರ್ಷೇಯ. ಈ ದೇವತೆ ಪ್ರಾಣಿ ಬಲಿಯನ್ನು ಅಪೇಕ್ಷಿಸುವ ದೇವರಾದರೂ ಇದರ ಪೂಜಾರಿ ಸಾಧಾರಣವಾಗಿ ಲಿಂಗಾಯತ ತಮ್ಮಡಿ(ಅರ್ಚಕ) ಆಗಿರುತ್ತಾನೆ. ಆ ತಮ್ಮಡಿ ಸಿಕ್ಕಿದಿದ್ದಲ್ಲಿ ದೇವರಿಗೆ ಹರಕೆಯನ್ನಾಗಲಿ, ಬಲಿಯನ್ನಾಗಲಿ ಒಪ್ಪಿಸಬೇಕಾದ ಭಕ್ತ, ಅಂಥ ತಮ್ಮಡಿ ಬೇರೆ ಗ್ರಾಮದಲ್ಲಿದ್ದರೂ ಕರೆದುಕೊಂಡು ಬಂದು, ಅವನ ಹಸ್ತದಿಂದಲೇ ಪೂಜೆ ನೆರವೇರಿಸುತ್ತಾನೆ. ಪೂಜಾರಿಗೆ ಕೆಲಸವೂ ಹೆಚ್ಚಿಗೆ ಇಲ್ಲ. ಭಕ್ತ ತಂದಿರುವ ಬಲಿಗೆ ಕೋಳಿ, ಕುರಿ ಅಥವಾ ಆಡು ಪೂಜೆ ಮಾಡಿದ ದೇವರ ತೀರ್ಥವನ್ನು ಪ್ರೋಕ್ಷಿಸುವುದಷ್ಟೇ ಅವನ ಕೆಲಸ. ಮುಂದಲ ಕ್ಷಣದಲ್ಲಿಯೇ ಭಕ್ತರು ಪ್ರಾಣಿಯ ಕತ್ತನ್ನು ಕತ್ತರಿಸಿ ಹಾಕುತ್ತಾರೆ. ಮೊಸರನ್ನು ನೆನೆಯಕ್ಕಿ ನೆನಗಡಲೆ ಪನಿವಾರ ಮುಂತಾದ ತಳಿಗೆಗಳನ್ನು ಸುಮಂಗಲಿಯರು ಎಂದು ಒಪ್ಪಿಸುವಾಗ ಪೂಜಾರಿ ಇಲ್ಲದಿದ್ದರೂ ನಡೆಯುತ್ತದೆ.

ಗ್ರಾಮದೇವತೆ ಒಂದು ವಿಗ್ರಹವೇ ಆಗಿರಬೇಕೆಂಬ ನಿಯಮವಿಲ್ಲ. ಅನೇಕ ವೇಳೆ ಅದೊಂದು ಬರಿಯ ಕಲ್ಲು ಆಗಿರಬಹುದು; ಇನ್ನೂ ಕೆಲವು ವೇಳೆ ನಾಲ್ಕಾರು ಗುಂಡುಕಲ್ಲುಗಳನ್ನು ಒಂದರ ಮೇಲೆ ಒಂದನ್ನು ಜೋಡಿಸುತತಾರೆ. ಕಲ್ಲಿನ ಮೇಲೆ ಏನಾದರೂ ಮೂಗು, ಬಾಯಿ, ಕಣ್ಣುಗಳನ್ನು ಕೊರೆದಿದ್ದರೂ ಗೊತ್ತಾಗುವುದಿಲ್ಲ. ಕಲ್ಲೆಲ್ಲ ಪೂರ್ತಿ ಎಣ್ಣೆ ಅರಿಶಿಣ, ಕುಂಕುಮದಿಂದ ಮೆತ್ತಿ ಹೋಗಿರುತ್ತದೆ. ಹೇಗೆ ಸಹಸ್ರಾರು ವರ್ಷಗಳಿಂದ ದೇವತೆ ಎಣ್ಣೆ ಕುಡಿದು ಎಣ್ಣೆಯಲ್ಲಿ ಮಜ್ಜನ ಮಾಡಿರುತ್ತದೆ.

ಪ್ರಾಚೀನ ಆದಿಮಾನವ ಪೂಜಿಸಿದ್ದ ಶಕ್ತಿ ದೇವತೆಯೇ ಇಂದಿನ ಗ್ರಾಮದೇವತೆ ಎಂದು ಭಾವಿಸಬಹುದು. ಈಚೆಗೆ ಕರ್ನಾಟಕದ ಕೆಲವು ಊರುಗಳಲ್ಲಿ ಈ ದೇವತೆಯನ್ನು ಉಡಿಸಲಮ್ಮ ಎಂಬ ಹೆಸರಿನಿಂದಲೂ ಕರೆಯುತ್ತಾರೆ.

ಎಲ್ಲ ಗ್ರಾಮಗಳಲ್ಲಿಯೂ ಸಾಧಾರಣವಾಗಿ ಗ್ರಾಮದೇವತೆ ಇರುವುದು ಮಾಮೂಲು ಆದರೂ ಗ್ರಾಮದೇವತೆಗಳು ಇಲ್ಲದ ಗ್ರಾಮಗಳುಂಟು. ಮಾರಿಯಮ್ಮನೇ ಗ್ರಾಮದೇವತೆಯಾಗುತ್ತಾಳೆ. ಆಕೆ ಗ್ರಾಮದೇವತೆಗಿಂತ ಸ್ವಲ್ಪ ಹೆಚ್ಚಿನ ಮಟ್ಟದ ಶಕ್ತಿದೇವತೆಯೇ ಹೊರತು ಚಂಡಿ, ಚಾಮುಂಡಿ, ಕಾಳಿಕಾ, ದುರ್ಗಿ ಮುಂತಾದ ದೇವತೆಗಳಿಗೂ ಮಾರಿಯಮ್ಮನಿಗೂ ಸಂಬಂಧವಿಲ್ಲ. ಹಳ್ಳಿ ದೊಡ್ಡದಾಗಿದ್ದರೆ, ಗ್ರಾಮದೇವತೆಗೆ ವರ್ಷಕ್ಕೆ ಒಂದು ಬಾರಿ ಬಂಡಿ ಹಬ್ಬ ಅಥವಾ ರಥೋತ್ಸವ ನಡೆಯುತ್ತದೆ. ಈ ಹಬ್ಬವನ್ನು ಹಸಿರು ಬಂಡಿ ಎಂದು ಕರೆಯುತ್ತಾರೆ. ಹಸಿರು ಎಲೆ ಚಿಗುರುಗಳ ತೋರಣ, ತೆಂಗಿನ ಗರಿ, ಅಡಕೆ ಹೊಂಬಾಳೆ ಇವುಗಳಿಂದ ಬಂಡಿಯನ್ನು ಅಲಂಕರಿಸುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ಈ ಹಬ್ಬ ನಡೆಯುವುದು. ಸಾಧಾರಣವಾಗಿ ಮಂಗಳವಾರ ಹಬ್ಬವನ್ನು ಬಹಳ ವೈಭವದಿಂದ ಆಚರಿಸುತ್ತಾರೆ. ಸುತ್ತಮುತ್ತಲ ಹಳ್ಳಿಗಳೆಲ್ಲೆಲ್ಲ ಮೊದಲೇ ಸಾರಿಸುತ್ತಾರೆಯಾದ್ದರಿಂದ ಬಾಳೆ ಕಂಬಗಳು ಲೆಕ್ಕವಿಲ್ಲದಷ್ಟು ಬಂದು ಬೀಳುತ್ತವೆ.[23]

ಗ್ರಾಮದೇವತೆಯ ವಿಗ್ರಹವನ್ನು ತಾತ್ಕಾಲಿಕವಾಗಿ ಮಣ್ಣಿನಲ್ಲಿ ಬಹು ಸುಂದರವಾಗಿ ನಿರ್ಮಿಸಿರುತ್ತಾರೆ. ಅಕ್ಕಿ, ತೆಂಗಿನಕಾಯಿ ರಾಶಿ ರಾಶಿ ಬಿದ್ದಿರಲಾಗಿ ಗ್ರಾಮದೇವತೆ 'ಒಕ್ಲೊನ ಹಾಸಕೊಂಡು, ಒಕ್ಲೊನ ಹೊದ್ದು, ಕಿವಿಯಲ್ಲಿ ಮುತ್ತಿಕ್ಕಿದ ಓಲೆ ತೊಟ್ಟು ಕಿಡಗಣ್ಣಿಯಾಗಿ' ಮರೆಯುತ್ತಾಳೆ. ಭಕ್ತರು ಬಾಗಿಲಿಗೆ ಛತ್ರಿ ಏರಿಸುತ್ತಾರೆ. ಏಳೂರು ಸಿಡಿಗಳು ಬರುತ್ತವೆ. ಹೆಡಗೇಲಿ ಹಣ್ಣು, ಗಡಿಗೇಲಿ ತುಪ್ಪ, ಇಡಗಾಯಿಗಳು, ಕುರಿಗಳ ಸಾಲು ಮಡಲಕ್ಕಿ - ಎಲ್ಲ ಬರುತ್ತವೆ. ಕೆಲವರು ಊರುಗಳಲ್ಲಿ ಕೊಂಡವನ್ನು ಸಹ ಹಾಯುತ್ತಾರೆ. ಮೆರವಣಿಗೆಯಲ್ಲಿ ದೊಡ್ಡ ದೊಡ್ಡ ಪಂಜುಗಳು ಉರಿಯುತ್ತವೆ. ಭಕ್ತರು ಭಕ್ತಿಯಿಂದ ದೇವತೆಯ ಹಾಡನ್ನು ಹಾಡುತ್ತಾರೆ. ದೇವತೆಯ ಮಹಿಮೆಯನ್ನು ಬಣ್ಣಿಸಲು ಅಸದಳ. 'ಸಾಸಿವೆ ಕಾಳಷ್ಟು ರೇಸಿಮೆ ಉಟ್ಟುಕೊಂಡು ಏಸೊಂದುಯ್ದವಳೆ ನೆರಿಗೇಯ, ತಾಯವ್ವ ಕೋಟೆಗೆ ಬೀಸವ್ಲೆ ಕುಡಿಸೆರೆಗ'(ಅಮ್ಮ ಧರಿಸಿರುವುದು ಸಾಸಿವೆಕಾಳಿನಷ್ಟು ರೇಸಿಮೆ. ಆದರೆ ತನ್ನ ಮಹಿಮೆಯಿಂದ ಅದರಿಂದಲೇ ವಿಶಾಲವಾದ ನೆರಿಗೆಯನ್ನು ರಚಿಸಿಕೊಂಡು ಕೋಟೆವರೆಗೆ ಸೆರಗಳನ್ನು ಬೀಸುತ್ತಾಳೆ). ಬಂಡಿಯ ಮೇಲೆ ಮೆರವಣಿಗೆ ಹೋಗುತ್ತಿರಬೇಕಾದರೆ, ಬಿಸಿಲಿನಲ್ಲಿ ದೇವತೆಯ ಓಲೆ ಹೊಳೆಯುತ್ತದೆ. ಆಚೆ ಈಚೆ ದಾಸ ಮತ್ತು ಪುರುಷ (ಧಾರ್ಮಿಕ ಪೂಜಕರು) ಕಡಾಸು, ಬವನಾಸಿ, ಬಲ ಕುಂಕುಗಳಲ್ಲಿ ತುತ್ತೂರಿ ಭಾಂಡಿ ಶಂಖ, ಎದೆಯ ಮೇಲೆ ಆನೆಯ ವಿಗ್ರಹ ಬಲಗೈಯಲ್ಲಿ ಜಾಗಟೆ ಒಡಿದಿರುತ್ತಾನೆ. ಪುರುಷ, ಭೈರವನ ಶಿಷ್ಯ. ಆತ ಕಬ್ಬಿಣದ ದೊಡ್ಡ ತ್ರಿಶೂಲ, ಬೆಳ್ಳಿಯ ಸಣ್ಣ ತ್ರಿಶೂಲಗಳನ್ನು ಸೇರಿದ ನವಿಲುಗರಿ ಕಂತೆಯನ್ನು ಹೊಲ ಮೇಲೆ ಇಟ್ಟುಕೊಂಡು ಕುಳಲ್ಲಿ ವಿಭೂತಿ ಚೀಲ ಕೈಯಲ್ಲಿ ಜಿಂಕೆಯ ಕೊಂಬಿನ ವಾದ್ಯ, ತೀರ್ಥದ ಬಟ್ಟಲು ಇವನ್ನು

ಹಿಡಿದಿರುತ್ತಾನೆ. ಸುಮಂಗಲಿಯರು ಐರಣಿ(ಪಂಚಕಲಶ) ಹೊತ್ತು ನಡೆಯುವರು. ಒಬ್ಬ ಆಚಾರಿ ಬಣ್ಣ ಹಾಕಿದ ಮರದ ಕುದುರೆಯ ಒಂದು ಕತ್ತನ್ನು ಕುಂಕುಳಲ್ಲಿ ಹಿಡಿದುಕೊಂಡು ಕುಣಿಯುತ್ತಾನೆ.(ಹಿಂದೆ ಒಂದು ಸಲ ಬಸವ, ಈಶ್ವರನ ಸನ್ನಿಧಿಗೆ ಹೋಗಿ ಹಿಂದಿರುಗದೆ ಇದ್ದುದರಿಂದ ಭೂಲೋಕದ ಆಚಾರಿಗಳು(ಬಡಗಿ)ಗಳು ಒಂದು ಕೀಲುಕುದುರೆ ಮಾಡಿ, ಈಶ್ವರನ ಬಳಿಗೆ ಕೊಂಡು ಹೋಗಿ ಅದರಿಂದಲೇ ಬೇಸಾಯ ಮಾಡುವುದಾಗಿ ಹೇಳಿದರಂತೆ. ಸೃಷ್ಟಿ ಒಮ್ಮುಖವಾಗಿರಲಿ ಎಂದು ಯೋಚಿಸಿ ಈಶ್ವರ ಬಸವನನ್ನು ಭೂಲೋಕಕ್ಕೆ ಕಳುಹಿಸಿದನೆಂದು ಒಂದು ಜಾನಪದ ಕಥೆ ಇದೆ.)

ಗ್ರಾಮದೇವತೆಗೆ ಅಪಾರ ಹರಕೆಗಳು ಬರುತ್ತವೆ. ಹರಕೆ ಹೊತ್ತವರೆಲ್ಲ ತಮ್ಮ ತಮ್ಮ ಮತಿಗನುಗುಣವಾಗಿ ಹರಕೆ ತಂದು ಒಪ್ಪಿಸಿರುತ್ತಾರೆ. ಆಡು, ಕುರಿ, ಅಸಂಖ್ಯಾತ ಕೋಳಿಗಳು ಬಲಿಯಾಗುತ್ತವೆ. ಭಕ್ತರ ಮಾಲೆ, ಕಣ್ಣಪ್ಪ ಎಲ್ಲವನ್ನೂ ತಂದು ಅಮ್ಮನಿಗೆ ಒಪ್ಪಿಸುತ್ತಾರೆ. ತಾಯಿಯರು ಮಗುವಿಗೆ ಹೆಸರಿಡು ಎಂದು ಬೇಡುತ್ತಾರೆ. ಕೋಲಾಟ ದೊಣ್ಣೆವರಸೆ, ಪಟ್ಟಾವರಸೆ, ರಮಡೋಲು, ವಾದ್ಯ ಬಾಣಬಿರುಸು - ಎಲ್ಲ ನಡೆಯುತ್ತದೆ. ಬಂಡಿ ಹಬ್ಬಕ್ಕೂ ಹಂದಿ ಮಾಂಸಕ್ಕೂ ಗಂಟು, ಸೋನೆಮಳೆ ಆಗ ತಾನೇ ಪ್ರಾರಂಭವಾಗುತ್ತಿರುವುದರಿಂದ ಆನಂತರ ತಮಟೆಗಳು ರಣವಾದ್ಯದ ಗತ್ತಿಗನುಗುಣವಾಗಿ ಕೈಯಲ್ಲಿ ಕೆಂಪು ವಸ್ತ್ರದ ಚೌಕಗಳನ್ನು ಹಿಡಿದುಕೊಂಡು ಆಯಾಸವಾಗುವವರೆಗೆ ವೀರ ಕುಣಿತವನ್ನು ಕುಣಿಯುತ್ತಾರೆ. ಕೊಂಬು ಕಹಳೆ ತುತ್ತೂರಿ ಭಾಂಕಿ ಕುಣಿಮಿಣಿ ತಾಳ ತಮಟೆ ಮೋರಿಗಳ ಕೋಲಾಹಲದೊಂದಿಗೆ ಕುಣಿತ ಕೊನೆಯಾಗುತ್ತದೆ.

ಹೀಗೆ ಮಾನವ ಊಹೆನೆಯ, ಅವಶ್ಯಕತೆಯ, ಅತ್ಯಂತ ಪ್ರಾಚೀನ ಶಕ್ತಿದೇವತೆಯಾದ ಗ್ರಾಮದೇವತೆ, ಜನರ ಬಾಳಿಗೆ ಪೌರುಷ ಸಾಹಸ ಕಷ್ಟ ಸಹಿಷ್ಣುತೆ ದುಷ್ಟ ನಿಗ್ರಹ ಶಿಷ್ಟಪರಿಪಾಲನ ಶಕ್ತಿಗಳನ್ನು ನೀಡಿ ಜನತೆಯನ್ನು ರಕ್ಷಿಸಿಕೊಂಡು ಬರುತ್ತದೆ.[೨೪]

ಸಂಖ್ಯೆ : ೧

ಗ್ರಾಮದೇವತೆ : ಚಳ್ಳಕೇರಮ್ಮ

ಸ್ಥಳ : ಬಳ್ಳಾರಿ ರಸ್ತೆ, ಚಳ್ಳಕೆರೆ

ಕಾಲ : ಕ್ರಿ.ಶ.ಸು. ೧೭-೧೮ನೇ ಶತಮಾನ

ಗ್ರಾಮೀಣ ಜೀವನದಲ್ಲಿ ಅನಾದಿಕಾಲದಿಂದಲೂ ಹಾಸುಹೊಕ್ಕಾಗಿ ಬೆರೆತು ಬಂದಿರುವ ಗ್ರಾಮದೇವತೆ ಇಡೀ ಗ್ರಾಮದ ಐಕ್ಯತೆ ಸಾಮರಸ್ಯ ಜೀವಾಳ ಗ್ರಾಮದೇವತೆಯೇ ಆಗಿರುತ್ತದೆ. ಈ ಜನರು ದೇವತೆಯಿಲ್ಲದೆ ಅವರು ಯಾವುದನ್ನು ಆರಂಭಿಸುವುದಿಲ್ಲ. ಈ ದೇವತೆಯನ್ನು ಮಾನವ ತನ್ನ ರಕ್ಷಣೆಗಾಗಿ ನಿರ್ಮಿಸಿಕೊಂಡು ಅವುಗಳಲ್ಲಿ ಚೇತನಶಕ್ತಿ ಹುದುಗಿದೆ ಎಂದು

ಕೊಂಡು ಅನಾದಿಕಾಲದಿಂದಲೂ ತುಂಬ ಭಯ -ಭಕ್ತಿಯಿಂದ ನಂಬಿ ಪೂಜಿಸಿದ್ದಾರೆ. ಆ ಮೂಲಕ ನಂಬಿಕೆ ಹುಟ್ಟು ಹಾಕಿ ಅದರ ಆಧಾರದ ಮೇಲೆ ಆಚಾರ-ವಿಚಾರ, ರೂಢಿ-ಸಂಪ್ರದಾಯಗಳ ಗೋಪುರ ಕಟ್ಟಿ ಅಂದಿನಿಂದ ಇಂದಿನವರೆಗೂ ಪ್ರಕೃತಿಯ ನಡುವೆ ಬದಕಲು ಆರಂಭಿಸಿದ್ದಾರೆ.

ಈ ದೇವತೆ ಮೂಲ ಚಿತ್ರದುರ್ಗ ಕೋಟೆಯೊಳಗೆ ಇದ್ದಿತೆಂದು, ಇಲ್ಲಿನ ಸ್ಥಳೀಯರು ಹೇಳುತ್ತಾರೆ. ಈಕೆ ಪಾಳೆಯಗಾರರ ಮನೆದೇವತೆಯು ಹೌದು. ಪಾಳೆಯಗಾರರ ಅವನತಿ ನಂತರ ಈ ದೇವತೆಯನ್ನು ಅವರ ವಂಶಸ್ಥರಾದ ದೊಡ್ಡ ಮದಕರಿನಾಯಕನನ್ನು. ತಮ್ಮ ಮನೆ ದೇವತೆಯಾದ ಚಳ್ಳಕೆರೆಯಮ್ಮನನ್ನು ಎತ್ತಿನಗಾಡಿಯ ಮೂಲಕ ದೊಡ್ಡೇರಿಗೆ ತಂದು ಅಲ್ಲಿ ಸ್ವಲ್ಪ ದಿನಗಳ ಕಾಲ ತಂಗಿ ನಂತರ ಚಳ್ಳಕೆರೆಗೆ ತಂದು ಪ್ರತಿಷ್ಠಾಪಿದರಂತೆ. ಚಳ್ಳಕೆರೆ ಎಂಬ ಹೆಸರು ಈ ದೇವತೆಯ ಹೆಸರಿನಿಂದ ಬಂದಿದೆ ಎಂದು ಹೇಳುತ್ತಾರೆ. ಚಳ್ಳಕೆರೆಯಲ್ಲಿ ಈ ಗ್ರಾಮದೇವತೆಗೆ ಮೂರು ವರ್ಷಕ್ಕೊಮ್ಮೆ ಹಾಗೂ ಐದು ವರ್ಷಕ್ಕೊಮ್ಮೆ ಜಾತ್ರೆ ಆಗುತ್ತದೆ. ಆಕೆಯ ಚರಿತ್ರೆಯಲ್ಲಿ ತಾಳಿಭಾಗ್ಯ ಕೊಡುವ ವಿಶಿಷ್ಟ ಸಂಪ್ರದಾಯವಿದೆ. ಈ ಗ್ರಾಮದೇವತೆ ಮೂಲತಃ ಒಬ್ಬ ಬ್ರಾಹ್ಮಣರ ಹೆಣ್ಣುಮಗಳು. ಈಕೆಯ ಸೌಂದರ್ಯಕ್ಕೆ ಮನಸೋತು ಕೆಳಸಮುದಾಯನೊಬ್ಬ ಸುಳ್ಳು ಹೇಳಿ ಮದುವೆಯಾಗಿ ಸಂಸಾರ ಮಾಡುತ್ತಾನೆ. ಹೆತ್ತ ಮಗನನ್ನು ಹುಡುಕುತ್ತ ಬಂದ ತಾಯಿಯಿಂದ, ಸಮುದಾಯ ತಿಳಿದು ಹತಾಶಳಾದ ಹೆಣ್ಣು, ತನಗೆ ಮೋಸ ಮಾಡಿ ಮದುವೆಯಾದ ಗಂಡನನ್ನು ಕೋಣದ ರೂಪದಲ್ಲಿ ಬಲಿ ತೆಗೆದುಕೊಳ್ಳುತ್ತಾಳೆ. ಕೆಳದ ವರ್ಷದಿಂದ ಜಾತ್ರೆಯಲ್ಲಿ ಹಾಕಿದ್ದ ಮಾಂಗಲ್ಯವನ್ನು ತೆಗೆದು ಆಕೆಯನ್ನು ವಿಧವೆ ಮಾಡುತ್ತಾರೆ. ಎರಡನೇ ದಿನ ಕಡಿದ ಕೋಣದಿಂದ ತೆಗೆದ ನೆಣದಿಂದ ದೇವಿಯ ಎದುರಿನ ದೃಷ್ಟಿ ಕಂಬದ ಬಳಿ ಕೋಣದ ತಲೆಯ ಮೇಲೆ ದೀಪ ಹಚ್ಚಿ ರಾತ್ರಿಯೆಲ್ಲ ಉರಿಸುತ್ತಾರೆ. ಇದರಿಂದ ಆಕೆಗೆ ತನ್ನ ಗಂಡನನ್ನು ಶಿಕ್ಷಿಸಿದ ಸಂತೃಪ್ತಿ ಸಿಗುತ್ತದೆ ಎಂಬ ನಂಬಿಕೆ ಇದೆ. ಅವಳಿಗೆ ತಾಳಿ ಧಾರಣೆ ಆಗುತ್ತದೆ. ಆಗ ಸುಮಂಗಲಿಯಾಗುತ್ತಾಳೆ. ಆ ತಾಳಿಯನ್ನು ಪಾಳೆಯಗಾರರು ತಮ್ಮ ಮನೆದೇವತೆ ಮತ್ತು ಮನೆಯ ಮಗಳು ಎಂಬ ಭಾವನೆಯಿಂದ ಕೊಡುತ್ತಾರೆ. ಪ್ರತಿ ವರ್ಷ ದುರ್ಗದ ಪಾಳೆಯಗಾರರ ವಂಶಸ್ಥರು ನಿರ್ವಹಿಸಿಕೊಂಡು ಬರುತ್ತಿದ್ದಾರೆ.

**ಆಚರಣೆಗಳು**

ಬುಡಕಟ್ಟು ಸಾಂಸ್ಕೃತಿಕ ಪರಂಪರೆಯ ಚಾರಿತ್ರಿಕ ಹಿನ್ನೆಲೆ ಇರುವುದರಿಂದ ಸಹಜವಾಗಿಯೇ ಜಾತ್ರೆಯಲ್ಲಿ ಪಾರಂಪರಿಕ ಆಚರಣೆಗಳು, ನಂಬಿಕೆಗಳು ತನ್ನದೇ ಆದ ವಿಶಿಷ್ಟತೆಯನ್ನು ಪಡೆಯುತ್ತಾ ಇಂದಿಗೂ ಮುಂದುವರಿಯುತ್ತಿರುವುದು ಕಂಡು ಬರುತ್ತದೆ.

೧. ವಿಶಿಷ್ಟ ಹರಕೆ

೨. ತಾಳಿಭಾಗ್ಯ ಸಂಪ್ರದಾಯ

೩. ಸಿಡಿ, ಗಾವು

ಚಳ್ಳಕೇರಮ್ಮ ಜಾತ್ರೆ ೩ ವರ್ಷ ಅಥವಾ ೫ ವರ್ಷಕ್ಕೊಮ್ಮೆ ಮಾರ್ಚ್ ತಿಂಗಳಲ್ಲಿ ನಡೆಯುತ್ತದೆ. ಚಿತ್ರದುರ್ಗ ಮದಕರಿನಾಯಕರ ವಂಶಕ್ಕೆ ಸೇರಿದ ವೀರಭದ್ರ ನಾಯಕರ ಮನೆತನದವರು ಇಂದಿಗೂ ಈ ದೇವಿಯ ಜಾತ್ರೆಯಲ್ಲಿ ತಾಳಿಭಾಗ್ಯ ಕೊಡುವ ಸಂಪ್ರದಾಯವನ್ನು ಪಾಲಿಸಿಕೊಂಡು ಬರುತ್ತಿರುವುದು ನಡೆದುಕೊಂಡು ಬಂದಿದೆ. ಮಹಿಳೆಯರು ತಮ್ಮ ಇಷ್ಟಾರ್ಥಗಳನ್ನು ನೆರವೇರಿಸಿಕೊಳ್ಳಲು ಹಲವು ಹರಕೆಗಳನ್ನು ಮಾಡಿಕೊಳ್ಳುತ್ತಾರೆ. ಇದರಲ್ಲಿ ಹಸಿರು ಬಳೆಗಳನ್ನು ಅರ್ಪಿಸುವುದು ವಿಶೇಷ. ಇಂದಿಗೂ ಪ್ರತಿ ಮಂಗಳವಾರ ಹಾಗೂ ಶುಕ್ರವಾರ ದೇವಿಗೆ ವಿಶೇಷ ಪೂಜೆ ನಡೆಯುತ್ತದೆ. ಕುಂಕುಮಾರ್ಚನೆ ಮಾಡಿಸುವುದು, ಉಡಿಗೆ ಸೀರೆ ಉಡಿಸುವುದು, ಎಲೆಪೂಜೆ ಕಟ್ಟಿಸುವುದು, ಉಡಿ ಅಕ್ಕಿ ನೀಡುವ ಸಂಪ್ರದಾಯಗಳು ಹಿಂದಿನಿಂದಲೂ ನಡೆದುಕೊಂಡು ಬಂದಿವೆ. ಪಟ್ಟಣದಲ್ಲಿರುವ ಕೆಲವು ರಾಜಕಾರಣಿಗಳು, ಅಧಿಕಾರಿಗಳು, ದಿನನಿತ್ಯ ಕೂಲಿ ಮಾಡುವವರು ಚಳ್ಳಕೇರೆಮ್ಮನಿಗೆ ಬೆಳಗಿನ ದರ್ಶನ ಪಡೆದು ಮುಂದಿನ ಕೆಲಸಕ್ಕೆ ತೆರಳುತ್ತಾರೆ.

ಚಳ್ಳಕೇರೆಮ್ಮನ ಜಾತ್ರೆ ೬ ದಿನಗಳ ಕಾಲ ನಡೆಯುತ್ತದೆ. ಈ ಜಾತ್ರೆಯಲ್ಲಿ ಹಿಂದಿನಿಂದಲೂ ನಿರ್ವಹಿಸಿಕೊಂಡು ಬಂದ ೧೨ ಸಮುದಾಯಗಳ ಆಯಗಾರರು ತಮ್ಮ ತಮ್ಮ ಕೆಲಸ ಕಾರ್ಯಗಳನ್ನು ಮುಂದುವರಿಸಿಕೊಂಡು ಬರುತ್ತಿರುವುದು ಕಂಡು ಬರುತ್ತದೆ.

ಉದಾ:- ಈಚಲ ಹೆಂಡ ದೊಡ್ಡೇರಿ ಈಡಿಗರ ಮನೆಯಿಂದ ಜಾತ್ರೆಯ ಸಂದರ್ಭದಲ್ಲಿ ಹೆಂಡವನ್ನು ತಂದು ಚಳ್ಳಕೆರೆಮ್ಮನಿಗೆ ನೈವೇದ್ಯ ಮಾಡುತ್ತಿರುವುದನ್ನು ಇಂದಿಗೂ ಕಾಣಬಹುದು.

**ಸಾರುವುದು :** ಈ ಜಾತ್ರೆಯ ಸಾರುವಿಕೆಯಿಂದ ಆರಂಭವಾಗುವುದು. ಗ್ರಾಮದೇವತೆಯ ಹಬ್ಬಕ್ಕೆ ಗ್ರಾಮದ ಜನರು ಮಾನಸಿಕ ಅಥವಾ ಆರ್ಥಿಕವಾಗಿ ಸಿದ್ಧಗೊಳಿಸುವ ಆರಂಭದ ಆಚರಣೆ. ಊರಿನ ಪ್ರಮುಖ ಮುಖಂಡರು, ಗೌಡರು, ಆಯಗಾರರು, ಪೂಜಾರಿ ಸೇರಿ ಜಾತ್ರೆಯ ರೂಪರೇಷೆಗಳ ಬಗ್ಗೆ ಚರ್ಚಿಸುವರು. ೧೫ ದಿನಕ್ಕೆ ಮುಂಚೆ ಸಾರು ಹಾಕುವರು.

**ಗಂಗೆ ಪೂಜೆ :** ಜಾತ್ರೆಯ ಮೊದಲ ದಿನ ಗಂಗೆ ಪೂಜೆ ಕಾರ್ಯ ನಡೆಯುತ್ತದೆ. ಚಳ್ಳಕೆರೆಯಿಂದ ದೊಡ್ಡೇರಿಯ ಗರಣಿಹಳ್ಳಕ್ಕೆ ಹೋಗಿ ಪೂಜೆ ಮುಗಿಸಿಕೊಂಡು ಅಂದೇ ಹಿಂದಿರುಗುತ್ತಾರೆ. ಈ ಗಂಗೆ ಪೂಜೆಗೆ ಹೋಗುವಾಗ ಬರುವಾಗ ಮಹಿಳೆಯರು ಸೋಬಾನೆ ಪದಗಳನ್ನು ಹಾಡುತ್ತಾರೆ.

**ಸಿಡಿ ಆಡುವುದು :** ಸಿಡಿ ಆಡುವುದು ಜಾತ್ರೆಯ ಪ್ರಧಾನವಾದ ಆಚರಣೆ. ಸುಮಾರು ೧೮ ಅಡಿ ಉದ್ದದ ಸಿಡಿ ಕಂಬಕ್ಕೆ ಹಸಿರು ಮತ್ತು ಹಳದಿ ಬಣ್ಣವನ್ನು ಬಳಿದಿರುತ್ತಾರೆ. ಅದನ್ನು ಜಾತ್ರೆಗಿಂತ ನಾಲ್ಕೈದು ದಿನ ಮುಂಚಿತವಾಗಿ ಸಿಡಿ ಬಂಡಿಗೆ ಕಟ್ಟುತ್ತಾರೆ. ಸಿಡಿ ಉತ್ಸವದಲ್ಲಿನ ಬಂಡಿಗೆ ಬಣ್ಣದ ಹೂ ಹಾಗೂ ಬೇವಿನಸೊಪ್ಪಿನಿಂದ ಶೃಂಗಾರ ಮಾಡುತ್ತಾರೆ. ಬಿಳಿ ಬಟ್ಟೆ ಧರಿಸಿ ಕಾಲಿಗೆ ಗೆಜ್ಜೆ ಕಟ್ಟಿದ ಹರಿಜನರ ಭಕ್ತನೊಬ್ಬನನ್ನು ಮೊದಲು ಬೆನ್ನಿಗೆ ಹಗ್ಗ ಹಾಕಿ ಸಿಡಿ ಮರದ ತುದಿಗೆ ಕಟ್ಟುತ್ತಾರೆ. ಸಿಡಿ ಮರವನ್ನು ಕೆಳಕ್ಕೆ, ಮೇಲಕ್ಕೆ ತಿರುಗಿಸಿದಾಗ ಕೈಯಲ್ಲಿ ಬೇವಿನಸೊಪ್ಪು ಹಿಡಿದು ಇನ್ನೊಂದು ಕೈಯಲ್ಲಿ ಭಂಡಾರವನ್ನು ಹಿಡಿದು, ಭಕ್ತರು ಕೈಕಾಲುಗಳನ್ನು ಹಿಂದಕ್ಕೆ ಮುಂದಕ್ಕೆ ಆಡಿಸುತ್ತಾರೆ. ಹೀಗೆ ಎರಡು ಮೂರು ನಿಮಿಷಕ್ಕೆ ಒಂದು ಬಾರಿ ಹರಕೆ ಮಾಡಿಕೊಂಡ ಭಕ್ತರನ್ನು ಸಿಡಿ ಆಡಲು ಅನುವು ಮಾಡಿಕೊಡುತ್ತಾರೆ. ಸುಮಾರು ೨ ಕಿಲೋಮೀಟರ್ ದೂರದವರೆಗೂ ೧೬ ಜೊತೆಯ ಎತ್ತುಗಳನ್ನು ಹೂಡಿ, ಸಿಡಿ ಬಂಡಿಯನ್ನು ಸಾಗಿಸುತ್ತಾರೆ. ಸಿಡಿ ಉತ್ಸವದಲ್ಲಿ ಭಜನೆ, ಕೋಲಾಟ, ಸೋಮನ ಕುಣಿತ, ನಂದಿಕೋಲು ಕುಣಿತ, ವಿವಿಧ ಜನಪದ ವಾದ್ಯಗಳೊಂದಿಗೆ ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಾರೆ. ಸಿಡಿ ನೋಡಲು ಸುತ್ತಮುತ್ತಲ ಹಟ್ಟಿಯವರು ಹಾಗೂ ದಾವಣೆಗೆರೆ, ಚಿತ್ರದುರ್ಗ, ಶಿವಮೊಗ್ಗ, ಆಂಧ್ರ ಮೂಲದವರು ಬರುತ್ತಾರೆ.

### ಬಲಿ

ಈ ದೇವತೆಗೆ ಬಲಿ ಪ್ರಧಾನ. ದೇವತೆಗೆ ಕೋಣ, ಕುರಿ, ಮೇಕೆ, ಬಲಿಗಳು ಕೊಡುವರು. ಪಟ್ಟದ ಕೋಣಕ್ಕೆ ಹೂವಿನಹಾರ, ಕುಂಕುಮ ಹಚ್ಚಿ ಅದರ ಮೈ ತುಂಬಾ ಎಣ್ಣೆ ಸವರಿ ಹೂ, ಹಾರಗಳಿಂದ ಶೃಂಗರಿಸುತ್ತಾರೆ. ನಂತರ ಕೋಣವನ್ನು ನಗರದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡಿ ಆ ದಿನದ ರಾತ್ರಿ ೧೨ ಗಂಟೆಗೆ ಊರಿನ ತಳವಾರನ ಕೈಯಿಂದ ಕೋಣವನ್ನು ಬಲಿ ಕೊಡುತ್ತಾರೆ. ನಂತರ ಹೊಟ್ಟೆ ಬಗೆದು ರಕ್ತ ಮತ್ತು ಕೆಸರು ತೆಗೆದು ಊರಿನ ಸುತ್ತಲು ಚರಗ ಚಲ್ಲುತ್ತಾರೆ. ದೇವಿಯ ಎದುರಿಗೆ ತಲೆಯನ್ನು ಇಟ್ಟು ಬಾಯಿಯೊಳಗೆ ಬಲಗಾಲನ್ನು ಇಡುವರು. ಅದರ ತಲೆಯ ಮೇಲೆ ಅದರ ನೆಣದಿಂದ ದೀಪ ಹಚ್ಚುತ್ತಾರೆ.

### ಹರಕೆ

ಹೆಣ್ಣುಮಕ್ಕಳು ಹೆಚ್ಚಾಗಿ ತಮ್ಮ ಇಷ್ಟಾರ್ಥಗಳನ್ನು ನೆರವೇರಿಸಿಕೊಳ್ಳಲು ಹರಕೆಗಳನ್ನು ಹೊರುತ್ತಾರೆ. ದಡಾರ, ಸಿಡುಬು, ಮತ್ತಿತರ ರೋಗು-ರುಜಿನಗಳು, ಮಕ್ಕಳ ಫಲ, ಮದುವೆ, ಉದ್ಯೋಗ ಇನ್ನೂ ಮುಂತಾದವುಗಳಿಗೆ ಹರಕೆ ಮಾಡಿಕೊಳ್ಳುತ್ತಾರೆ. ತಮ್ಮ ಇಷ್ಟಾರ್ಥಗಳು ನೆರವೇರಿದಾಗ, ಭಕ್ತಾದಿಗಳು ಬೇವಿನ ಉಡುಗೆ, ಜವಳ ಕಾರ್ಯ, ಒಪ್ಪತ್ತು, ಉರುಳುಸೇವೆ,

ಕಾಗಿಕೆ ಅಥವಾ ಕುರಿ, ಮೇಕೆ ಬಲಿ ಕೊಡುವುದು, ಗಾವು ಮರಿ ನೀಡುವುದು ಇನ್ನೂ ಮುಂತಾದವುಗಳ ಮೂಲಕ ತಮ್ಮ ತಮ್ಮ ಹರಕೆಗಳನ್ನು ಈ ದೇವತೆಗೆ ತೀರಿಸುತ್ತಾರೆ.

ಕೋಲಾಟ, ಭಜನೆ, ಸೋಮನ ಕುಣಿತ, ನಂದಿಕೋಲು, ಸೋಬಾನೆ, ಬಯಲಾಟ ಇನ್ನೂ ಮುಂತಾದ ಕಲಾ ಪ್ರದರ್ಶನಗಳು ಕಂಡುಬರುತ್ತವೆ.

**ಗಾವು ಜಿಗಿಯುವುದು**

ಈ ಜಾತ್ರೆಯಲ್ಲಿ ಗಾವು ಜಿಗಿಯುವುದು ಒಂದು ವಿಶಿಷ್ಟವಾದ ಆಚರಣೆ. ಒಂದು ಕಪ್ಪು ಬಣ್ಣದ ಹೋತು ಮರಿಯನ್ನು ಪೋತರಾಜನು ಹಲ್ಲುಗಳಿಂದ ಸಿಗಿದು ಅದರ ರಕ್ತವನ್ನು ಕುಡಿದು, ಅದರ ಗೋಮಾಳ ಕೊರಳನ್ನು ಹಾಗೂ ಮಾಂಸವನ್ನು ಕಿತ್ತು ತಿನ್ನುವುದೇ ಈ ಆಚರಣೆಯ ಮುಖ್ಯ ಕ್ರಿಯೆ. ೩ ದಿನ ಮುಂಚಿತವಾಗಿ ಗಾವು ಸಿಗಿಯುವ ಪೋತುರಾಜರು ಉಪವಾಸವಿದ್ದು ಮಡಿಯಿಂದ ದೇವತೆಗೆ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಈ ಪೋತುರಾಜರನ್ನು ಪಟ್ಟಣದಲ್ಲಿ ಮೆರವಣಿಗೆ ಮಾಡಿ, ಗಂಗೆ ಪೂಜೆಗೆ ಹೋಳಿಗೆ ಹೋಗಿ ಗಂಗೆ ಪೂಜೆ ಮಾಡಿಕೊಂಡು ತದನಂತರ ಉದ್ದನೆಯ ಕೂದಲು ಬೆನ್ನಿನವರೆಗೆ ಇಳಿ ಬಿಟ್ಟು ಮೀಸೆ ತಿರುವುತ್ತಾ, ಚಾಟಿ ಹೆಗಲ ಮೇಲೆ ಹಾಕಿಕೊಂಡು ಉರುಮೆ ವಾದ್ಯದವರೊಂದಿಗೆ ಕುಣಿಯುತ್ತಾ, ಕೇಕೆ ಹಾಕುತ್ತಾ ದೇವಸ್ಥಾನದ ಮುಂಭಾಗಕ್ಕೆ ಬಂದ ದೇವತೆಯ ಅಪ್ಪಣೆ ಕೊಟ್ಟ ನಂತರ ಗಾವು ಜಿಗಿಯುವುದು.

ಸಂಖ್ಯೆ : ೧

ಗ್ರಾಮದೇವತೆ : ಕರಿಯಮ್ಮ

ಸ್ಥಳ : ಸಾಣಿಕೆರೆ ಊರಿನ ಮಧ್ಯದಲ್ಲಿ

ಕಾಲ : ಕ್ರಿ.ಶ.ಸು. ೧೮೭೮

ಚಳ್ಳಕೆರೆ ತಾಲ್ಲೂಕಿನ ಕಸಬಾ ಹೋಬಳಿಯಲ್ಲಿ ಬರುವ ಸಾಣಿಕೆರೆ ಚಳ್ಳಕೆರೆ ಕೇಂದ್ರಕ್ಕೆ ೧೪ ಕಿಲೋಮೀಟರ್ ದೂರದಲ್ಲಿರುವ ಈ ಊರು ತನ್ನದೇ ಆದ ಇತಿಹಾಸ ಹೊಂದಿದೆ. ಗ್ರಾಮಪಂಚಾಯಿತಿ ಕೇಂದ್ರಸ್ಥಾನವಾಗಿರುತ್ತದೆ. ಈ ಗ್ರಾಮದ ಪ್ರಧಾನ ದೇವತೆ ಹಾಗೂ ಗ್ರಾಮದೇವತೆ ಶ್ರೀ ಕರಿಯಮ್ಮ (ಗಂಜಿಗುಂಟಮ್ಮ) ದೇವತೆಯಾಗಿರುತ್ತಾಳೆ. ಈ ದೇವತೆ ಮೂರು ತಲೆಮಾರಿನಿಂದ ಜಾನಪದ ಇತಿಹಾಸ ಹೊಂದಿರುತ್ತದೆ.

*** ದೇವತೆ ಬಂದ ಜಾನಪದ ಕುರಿತಾದ ಒಂದು ಕಥೆ**

ಸಾಣಿಕೆರೆ ಗ್ರಾಮದಲ್ಲಿ ಪರಿಶಿಷ್ಟ ವರ್ಗ ನಾಯಕ ಜನಾಂಗದವರು ಹೆಚ್ಚಿರುತ್ತಾರೆ. ಈ ಜನಾಂಗದ ಮಂಡಲೊರು ಬೆಡಗಿನ ಅಣ್ಣ-ತಮ್ಮಂದಿರು ಆಚರಣೆ ಮಾಡಿಕೊಂಡು ಬಂದಿರುವ ಸಂಪ್ರದಾಯ ಪದ್ಧತಿಗಳಿವೆ.

ಮೂಲತಃ ಕರಿಯಮ್ಮ ದೇವತೆ ಎಂದೇ ಪ್ರಸಿದ್ಧಿ ಆದರೆ ಸಾಣೆಕೆರೆ ೩ ಕಿಲೋಮೀಟರ್ ಇರುವ ಗಂಜಿಗುಂಟೆ ಗ್ರಾಮವು ಇದ್ದು ಪಕ್ಕದಲ್ಲಿ ಹಳ್ಳ(ಗರಣಿಹಳ್ಳ) ಕಂಡುಬರುತ್ತದೆ. ಹಿಂದೆ ವರ್ಷಪೂರ್ತಿ ಮಳೆಯಾಗಿ ಯಾವಾಗಲೂ ಹಳ್ಳವು ನೀರಿನಿಂದ ತುಂಬಿರುತ್ತಿತ್ತು. ಮಂದಲೊರು ಬೆಡಗಿನ ಅಣ್ಣ-ತಮ್ಮಂದಿರಲ್ಲಿ ಗಂಜಿಕುಂಟೆ ಗ್ರಾಮದ ತಳವಾರಿಗೆ ಮಾಡುತ್ತಿದ್ದ ಅಜ್ಜನ ಜೊತೆ ಇನ್ನು ಉಳಿದ ನಾಲ್ಕೈದು ಮಂದಿ, ದನಗಳನ್ನು ಹೊಡೆದುಕೊಂಡು ಹಳ್ಳದ ಕಡೆ ಪ್ರತಿದಿನ ಹೋಗುತ್ತಿದ್ದರು.

ಗಂಜಿಗುಂಟೆಯ ಲಿಂಗಾಯಿತರ ಪೈಕಿ ಒಬ್ಬರ ಮನೆಯಲ್ಲಿ ಯಾರಿಗೂ ಗೊತ್ತಾಗದಂತೆ ಈ ಕರಿಯಮ್ಮ ದೇವತೆಯು ನೆಲೆಗೊಂಡಿರುತ್ತಾಳೆ. ಆ ಮನೆಯ ಸಮೃದ್ಧಿಯಲ್ಲಿ ಪಡೆದುಕೊಂಡಾಗ, ಆಡಂಬರದ ಪೂಜೆಯನ್ನು ತಿರಸ್ಕರಿಸಿ ಮನೆಯಲ್ಲಿದ್ದ ಹತ್ತಿ ನವಣಿ ಬೆಂಕಿಯನ್ನು ಹೊತ್ತಿಸಿ, ಆ ಮನೆಯನ್ನು ತೊರೆದು ಗ್ರಾಮದ ಹತ್ತಿರ ಬೇವಿನಮರದ ಹತ್ತಿರ ನೆಲೆ ನಿಲ್ಲುತ್ತಾಳೆ. ಈಗಲೂ ಅಲ್ಲಿ ಪಾದ ಮುದ್ರೆಯ ಪಾದಗಟ್ಟೆ ಇದೆ.

ಶ್ರೀ ಕರಿಯಮ್ಮ ದೇವತೆಯ ಆಚರಣೆಗಳು

ದನ ಮೇಯಿಸಲು ಹೋದ ಐದು ಜನ ಅಣ್ಣ-ತಮ್ಮರಲ್ಲಿ ತಳವಾರಿಕೆ ಮಾಡುವ ಒಬ್ಬ ಅಣ್ಣನಿಗೆ ಪ್ರತಿದಿನ ನಾನು ಬರುತ್ತೇನೆ ಎಂದು ಕೇಳುತ್ತಾಳೆ. ಇದನ್ನು ಕಂಡ ಭಯದಿಂದ ನಾಲ್ಕೈದು ಅಣ್ಣಂದಿರಿಗೆ ಹೇಳಿದಾಗ ತದನಂತರ ಅವರೆಲ್ಲರೂ ದೇವಿಯು ಇರುವ ಸ್ಥಳಕ್ಕೆ ಹೋಗಿ ನೀನು ಯಾರು ಕೇಳಿದಾಗ ನೀನು ದೇವತೆಯೇ ಅಥವಾ ದೆವ್ವವೇ ಎಂದು ಕೇಳಿದಾಗ, ಆ ದೇವತೆ ದೆವ್ವನು ಅಲ್ಲ ಪಿಶಾಚಿಯೂ ಅಲ್ಲ, ನಾನು ಒಬ್ಬ ದೇವತೆ ನಿಮ್ಮ ಕುಲದೇವರಾಗಿ ನಿಮ್ಮ ಊರಿಗೆ ಬರುತ್ತೇನೆ ಎಂದು ಹೇಳಿದಾಗ ಇವರೆಲ್ಲ ಸೇರಿ ಕಂಬಳಿಯಲ್ಲಿ ತಂದು ಗ್ರಾಮದ ಮಧ್ಯೆ ಭಾಗದಲ್ಲಿ ಸ್ಥಾಪಿಸಿ ಸಣ್ಣ ಗುಡಿಯೊಂದನ್ನು ಕಟ್ಟಿ ಪೂಜಿಸುತ್ತಾರೆ. ಗಂಜಿಗುಂಟೆಯಿಂದ ಬಂದಿರುವ ಕಾರಣ ಗಂಜಿ ಗುಂಟಮ್ಮ ಎಂದು ನಾಮಕರಣವಾಗಿದೆ. ಗ್ರಾಮ ದೈವ ರೂಪಿಯಾಗಿ ಹಲಗೆಯ ಸಣ್ಣಪಟ್ಟಿಗೆ ಇದ್ದು, ತದನಂತರ ವಿಶಿಷ್ಟ ಪಟ್ಟಿಗೆಯಲ್ಲಿ ಇಟ್ಟಿದ್ದಾರೆ. ಹಿಂದೆ ತ್ರಿಕೋನಾಕೃತಿಯ ಪಟ್ಟಿಗೆಯಿದ್ದು ಈಗ ಚೌಕಕಾರದ ದೊಡ್ಡ ಪಟ್ಟಿಗೆ ಮಾಡಿ ಅದರಲ್ಲಿ ಸಾಲಿಗ್ರಾಮ ಹಾಗೂ(ರಕ್ತ ಚೆಂದನದ) ರಕ್ತ ಭೂತಾಳಿ ಮರದಿಂದ ಮಾಡಿದ ಮೂರ್ತಿ ಇದೆ. ಪಲ್ಲಕ್ಕಿ ಇದ್ದು ಉತ್ಸವ ಮೂರ್ತಿಯು ಇರುತ್ತದೆ. ಆನೆಯ ಮೇಲೆ ಕುಳಿತ್ತಿರುವ ಕೈಯಲ್ಲಿ ಖಡ್ಗ ಹಿಡಿದು ಉಗ್ರ ರೂಪದಲ್ಲಿ ನಿಂತಿದ್ದಾಳೆ.

ಸಪ್ತಮಾತೃಕೆಯಲ್ಲಿ ಇಂದ್ರಾಣಿ ದೇವಿಯಾಗಿರುತ್ತಾರೆ ಮತ್ತು ರಕ್ತ ಚಂದ್ರನದಿಂದ ಮಾಡಿದ ಮೂರು ಸೋಮಗಳು ಇರುತ್ತೇವೆ. ಕೆಂಪು, ಹಳದಿ, ಕಪ್ಪು ಸೋಮಗಳು ಕಂಡುಬರುತ್ತಿವೆ. ಈ ದೇವತೆಯ ಅಂಗ ರಕ್ಷಕರು ದೇವತೆಯು ಹೊರಡುವ ಸಂದರ್ಭದಲ್ಲಿ ಇವುಗಳ ಮುಖಾಂತರ ಹೊರಗೆ ಹೋಗಬೇಕಾಗುವಾಗ ವಾದ್ಯ, ಡೊಳ್ಳು ಮೂಲಕ ಮೆರವಣಿಗೆ

ಮಾಡಲಾಗುವುದು. ಈ ದೇವತೆಗೆ ೫ ಅಥವಾ ೧೦ ವರ್ಷಕ್ಕೊಮ್ಮೆ ಜಾತ್ರೆ ಮಾಡಲಾಗುತ್ತಿದ್ದು, ಈಗ ಅನುಕೂಲವಾಗಿರುವುದರಿಂದ ೩ ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ.

**ಜಾತ್ರೆಯ ಕಾರ್ಯಕ್ರಮಗಳು**

* ಸಾರುವುದು

* ಊರಿನ ಮಧ್ಯಭಾಗದಲ್ಲಿ ದೇವತೆಯನ್ನು ಕರೆದು ತಂದು ೧೨ ಕೈವಡಸ್ಥರನ್ನು ಸೇರಿಸಿ ಜಾತ್ರೆಗೆ ಸಜ್ಜು ಮಾಡುವುದು.

ನಂತರ ಮಧುವನಗಿತ್ತಿ ಮಾಡುವುದು. ತದನಂತರ ಶಿವಶರಣರ ಆರಾಧನೆ ಮಾಡುವುದು ಹಾಗೂ ದೇವತೆಯನ್ನು ಗಂಗೆ ಪೂಜೆಗೆ ಹಳ್ಳಕ್ಕೆ ಕರೆದುಕೊಂಡು ಹೋಗುವುದು. ಚುಲುಮೆ ತೆಗೆದು ಗಂಗೆ ಪೂಜೆ, ಹೋಮ, ಚುಲುಮೆಸುತ್ತ ೧೦೧ ಎಡೆ ಹಾಕುವುದು ಊರಿನ ೫ ಮಂದಿ ಯುವಕರು ಬೆಳಗ್ಗೆಯಿಂದ ಉಪವಾಸವಿದ್ದು, ಸಾಯುಂಕಾರ ಹೊಳೆ ಪೂಜೆಯ ಶಾಸ್ತ್ರ ಮುಗಿಸಿಕೊಂಡು ತದನಂತರ ಇವರಿಗೆ ಬಂಗಾರದ ಹಾಗೂ ಬೆಳ್ಳಿಯ ಪದಕವನ್ನು ಕೊರಳಿಗೆ ಹಾಕಿ ಕಂಕಣವನ್ನು ಕಟ್ಟಲಾಗುತ್ತದೆ. ದೇವರು ಗಂಗೆಪೂಜೆ ಮುಗಿಸಿಕೊಂಡು ತದನಂತರ ಊರಿನ ಸ್ವಲ್ಪ ದೂರದಲ್ಲಿರುವ ಹೊರಗಿನ ಗುಡಿಯಲ್ಲಿ ಕುಳಿತುಕೊಳ್ಳುತ್ತದೆ.

**ಕರಿಯಮ್ಮ ದೇವತೆಯ ವಿಶಿಷ್ಟ ಕಾರ್ಯಕ್ರಮಗಳು**

೧. ಸಿಡಿ ಆಡುವುದು

೨. ಕೆಲವು ಪ್ರಾಣಗಳನ್ನು ಬಲಿ ಕೊಡುವುದು.

೩. ಭಕ್ತಾಧಿಗಳು ಹರಕೆಯನ್ನು ಒಪ್ಪಿಸುವುದು.

೪. ಗಾವು ಜಿಗಿಯುವುದು

ಈ ಮೇಲ್ಕಂಡ ಪ್ರತಿಯೊಂದು ಕಾರ್ಯಕ್ರಮಗಳು ಪ್ರತಿ ವರ್ಷವು ಚಾಚು ತಪ್ಪದೇ ಕರಿಯಮ್ಮ ದೇವತೆಗೆ ನಡೆಯುತ್ತಿರುವುದ ಒಂದು ವಿಪರ್ಯಾಸವೆಂದು ಹೇಳಬಹುದಾಗಿದೆ.

ಸಂಖ್ಯೆ : ೩

ಗ್ರಾಮದೇವತೆ : ಕಟ್ಟೆ ಮಾರಕ್ಕ

ಸ್ಥಳ : ನಲ್ಲೂರಹಳ್ಳಿಯ ಪಕ್ಕದಲ್ಲಿ ಅಥವೂ ಪೂರ್ವದಕ್ಕಿಗೆ

ಕಾಲ : ಕ್ರಿ.ಶ.ಸು. ೧೮೯೬

ಚಳ್ಳಕೆರೆ ತಾಲೂಕಿನ ಕಸಬಾ ಹೋಬಳಿಯಲ್ಲಿ ಬರುವ ದೇವರಮರಿಕುಂಟೆ ಗ್ರಾಮ ಪಂಚಾಯ್ತಿಯ ಚಿಕ್ಕ ಹಳ್ಳಿ ನಲ್ಲೂರಹಳ್ಳಿಯ ಪೂರ್ವದಿಕ್ಕಿಗೆ ಕಟ್ಟೆ ಮಾರಕ ನೆಲೆಸಿರುವುದು ಕಂಡು ಬರುತ್ತದೆ. ಈ ದೇವಾಲಯ ಗರ್ಭಗೃಹ, ಸಭಾಮಂಟಪ ಹೊಂದಿದ್ದು, ಗರ್ಭಗೃಹದಲ್ಲಿ

ಬೆಳ್ಳಿಯ ಮಾರಮ್ಮನ ಪ್ರತಿಮೆಯನ್ನು ಇಟ್ಟು ಪೂಜಿಸಲಾಗುವುದು. ದೇವಿಯು ತನ್ನ ಕೈಗಳಲ್ಲಿ ತ್ರಿಶೂಲ, ಗದೆ, ಶಂಖ, ಖಡ್ಗ, ನಾಗರಹಾವು, ಚಕ್ರವನ್ನು ಹಿಡಿದಿದ್ದಾಳೆ. ಗರ್ಭಗೃಹದ ಬಾಗಿಲುವಾಡವು ಸರಳಾಗಿದ್ದು, ಯಾವುದೇ ರೀತಿಯಿ ಆಲಂಕಾರ ಕಂಡುಬರುವುದಿಲ್ಲ.

**ಕಟ್ಟೆ ಮಾರಕ್ಕನ ಆಚರಣೆಗಳು**

ಗೌರಸಮುದ್ರ ಮಾರಕ್ಕನ ಜಾತ್ರೆ ಮುಗಿದ ತದನಂತರ ೨ನೇ ವಾರದಲ್ಲಿ ಕಟ್ಟೆಮಾರಕ್ಕನ ಜಾತ್ರೆ ನಡೆಯುತ್ತದೆ. ಈ ಕಟ್ಟೆ ಮಾರಕ್ಕವು ೭ ಗ್ರಾಮಗಳಿಗೆ ಗ್ರಾಮದೇವತೆಯಾಗಿರುವುದು ಸಹಜವಾಗಿ ಕಂಡುಬರುತ್ತದೆ. ಈ ಜಾತ್ರೆಯಲ್ಲಿ ಕುರಿ, ಮೇಕೆ, ಕೋಳಿಗಳನ್ನು ಬಲಿ ಕೊಡುವ ಆಚರಣೆಗಳು ವಾಡಿಕೆಯಂತೆ ನಡೆಯುತ್ತದೆ. ಕೆಲವು ವಿಶೇಷ ಸಂದರ್ಭದಲ್ಲಿ ಈ ದೇವಾಲಯದಲ್ಲಿ ಕೆಲವು ಪ್ರಾಣಿಗಳನ್ನು ಬಲಿ ಕೊಡುವುದು ಹಾಗೂ ತಮ್ಮ ಭಕ್ತಾದಿಗಳು ಹರಕೆಯನ್ನು ತೀರಿಸಿಕೊಂಡು ಹೋಗುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಈ ಕಟ್ಟೆಮಾರಕ್ಕನ ಜಾತ್ರೆಯು ಚಾಚುತಪ್ಪದೆ ಪ್ರತಿವರ್ಷವು ನಡೆಯುತ್ತಿರುವುದು ಕಂಡು ಬರುತ್ತದೆ. ಪ್ರತಿ ವಾರದಲ್ಲಿ ಮಂಗಳವಾರ ಮತ್ತು ಶುಕ್ರವಾರ ವಿಶೇಷ ಪೂಜೆ ನಡೆಯುವುದು ಕಂಡುಬರುತ್ತದೆ.

**ಅಡಿ ಟಿಪ್ಪಣಿಗಳು**

೧. ಅನಂತ ರಂಗಾಚಾರ್ ಎನ್., ಭಾರತೀಯ ಶಿಲ್ಪಶಾಸ್ತ್ರದ ಸಂಕ್ಷಿಪ್ತ ಪರಿಚಯ, ಪು. ೨೦೮.

೨. ಪೂರ್ವೋಕ್ತ, ಪು. ೨೦೯.

೩. ದೇವರಕೊಂಡಾರೆಡ್ಡಿ(ಕನ್ನಡ ಅನುವಾದ), ಭಾರತೀಯ ವಾಸ್ತುವಿದ್ಯೆ, ಪು. ೧.

೪. ಪೂರ್ವೋಕ್ತ, ಪು. ೩, ೫.

೫. ದೇವರಕೊಂಡಾರೆಡ್ಡಿ(ಕನ್ನಡ ಅನುವಾದ), ಭಾರತೀಯ ವಾಸ್ತುವಿದ್ಯೆ, ಪೂರ್ವೋಕ್ತ, ಪು. ೩-೮.

೬. ರಾಮಚಂದ್ರರಾವ್ ಎಸ್.ಕೆ., ಕೆಲವು ಧಾರ್ಮಿಕ ಕರ್ತವ್ಯಗಳು, ಪು. ೮೦.

೭. ಪೂರ್ವೋಕ್ತ, ಪು. ೭೭.

೮. ಸೋಮಶೇಖರ್ ಎಸ್.ವೈ. ಕರ್ನಾಟಕದ ದೇವಾಲಯ: ಚಿತ್ರದುರ್ಗ ಜಿಲ್ಲೆ, ಪು. ೨೩

೯. ಪೂರ್ವೋಕ್ತ, ಪು. ೨೫

೧೦. ಪೂರ್ವೋಕ್ತ, ಪು. ೭

೧೧. ಪೂರ್ವೋಕ್ತ, ಪು. ೧೬

೧೨. ಪೂರ್ವೋಕ್ತ, ಪು. ೩೭

೧೩. ಸುರೇಶ ಜಿ., ಚಿತ್ರದುರ್ಗ-ದಾವಣಗೆರೆ ಜಿಲ್ಲೆಗಳ ದೇವಾಲಯಗಳು, ಪು. ೪೯

೧೪. ಪೂರ್ವೋಕ್ತ, ಪು. ೫೧

೧೫. ರಹಮತ್ ತರೀಕೆರೆ, ಕರ್ನಾಟಕ ಶಾಕ್ತಪಂಥ, ಪು. ೧.

೧೬. ಪೂರ್ವೋಕ್ತ., ಪು. ೨.

೧೭. ಮಠದ ವಿರೂಪಾಕ್ಷಯ್ಯ(ಸಂ), ೨೦೦೧, ವೀರಸಂಕಲ್ಪ, ಸ್ಮರಣ ಸಂಚಿಕೆ, ಚಳ್ಳಕೆರೆ, ಪು. ೮೦.

೧೮. ಪೂರ್ವೋಕ್ತ, ಸ್ಮರಣ ಸಂಚಿಕೆ. ಪು. ೮೦.

೧೯. ಶ್ಯಾಮಲ ಸಿ.ಆರ್., ಪೂರ್ವೋಕ್ತ, ಪು. ೧೯೬.

೨೦. ಪೂರ್ವೋಕ್ತ, ಪು. ೧೯೬.

೨೧. ಪ್ರೊ. ಕೆ. ಎನ್. ಗಂಗಾನಾಯಕ್ ಪ್ರಧಾನ ಸಂಪ್ರದಾಕರು, ಪ್ರೊ. ಆರ್. ಇಂದಿರಾ ಸಂಪಾದಕರು, ಸಮಾಜಶಾಸ್ತ್ರ, ಕರ್ನಾಟಕ ಸರ್ಕಾರ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು, ಪು. ೭೪.

೨೨. ಪೂರ್ವೋಕ್ತ, ಪು. ೭೫.

೨೩. ಪೂರ್ವೋಕ್ತ, ಪು. ೭೬.

೨೪. ಪೂರ್ವೋಕ್ತ, ಪು. ೭೭.



# ಅಧ್ಯಾಯ: ಐದು

## ಕೆರೆಗಳು

ಪಂಚಭೂತಗಳಲ್ಲಿ ಒಂದಾದ ನೀರು ವಿಶ್ವದಲ್ಲಿರುವ ಕೋಟ್ಯಾಂತರ ಜೀವರಾಶಿಗಳಾದ ಸಸ್ಯ ಹಾಗೂ ಪ್ರಾಣಿ ವರ್ಗಗಳಿಗೆ ಅತ್ಯಂತ ಅವಶ್ಯ. ನಮ್ಮ ಜಗತ್ತಿನ ಜೀವಿಗಳಿಗೆ ಜೀವನಾಧಾರದಂತಿರುವ ನೀರು ನಮಗೆ ಅತ್ಯಂತ ಪರಿಚಿತವಾಗಿರುವ ದ್ರವವಾಗಿದೆ. ದ್ರವ ಎಂಬುದು ವಸ್ತುವಿನ ಒಂದು ಸ್ಥಿತಿ ಭೂಮಿಯ ಮೇಲ್ಮೈಯ ಮೂರನೇ ಎರಡು ಭಾಗ ನೀರಿನಿಂದಲೇ ತುಂಬಿಕೊಂಡಿದೆ. ಹಾಗಿದ್ದರೂ ಜಗತ್ತಿಗೆ ಅನೇಕ ಭಾಗಗಳಲ್ಲಿ ಜನರು ಮತ್ತು ಉಳಿದ ಜೀವಿಗಳು ಕುಡಿಯುವ ನೀರಿಗಾಗಿ ಪರಿತಪಿಸುತ್ತಿದ್ದಾರೆ.[೧]

ಈ ಹಿನ್ನೆಲೆಯಲ್ಲಿಯೇ ನೀರನ್ನು ಪಂಚಭೂತಗಳಲ್ಲಿ ಒಂದೆಂದು ಕರೆದಿರುವುದು. ಪ್ರಪಂಚದ ನಾಗರಿಕತೆಗಳು ಬೆಳೆದುದು ನೀರಿನ ತಾಣಗಳ ಆಸುಪಾಸಿನಲ್ಲಿ ಎಂಬುದು ತಿಳಿದ ಸಂಗತಿ. ಹೀಗಾಗಿಯೇ ಪ್ರಾಗೈತಿಹಾಸಿಕ ಕಾಲದ ಮಾನವನ ವಾಸದ ನೆಲೆಗಳು ನೀರಿರುವ ನೈಸರ್ಗಿಕ ತಾಣಗಳೇ ಆಗಿವೆ. ಅವು ನದಿ, ಸರೋವರ, ಹಳ-ಕೊಳ್ಳಗಳಾಗಿವೆ. ಈ ದಿಸೆಯಲ್ಲಿ ಮುನ್ನೆಡೆದು ಕೃತಕವಾಗಿ ನೀರನ್ನು ಸಂಗ್ರಹಿಸಿ ತನ್ನ ಅಗತ್ಯಕ್ಕೆ ತಕ್ಕಂತೆ ಬಳಸಿಕೊಳ್ಳಲು ನಡೆಸಿದ ಪ್ರಯತ್ನಗಳ ಫಲಗಳೇ ಕೆರೆ-ಕಟ್ಟೆ, ಕುಂಟೆ, ಬಾವಿಗಳಾಗಿ ರೂಪತಾಳಿದವು.

ಇಂತಹ ಪ್ರಯತ್ನಗಳು ನೂತನ ಶಿಲಾಯುಗದ ಅಂತಿಮ ಕಾಲಕ್ಕಾಗಲೇ ವ್ಯಾಪಕವಾಗಿ ಬೆಳೆದು, ಮಾನವ ಒಂದೆಡೆ ನೆಲೆನಿಂತು ತನ್ನ ಜೀವನ ಸಾಗಿಸಲು ಪ್ರಾರಂಭಿಸಿದ. ಅರಸರು ಅಧಿಕಾರಿಗಳು ಮೊದಲಾದವರು ತಮ್ಮ ರಾಜ್ಯ, ಪ್ರದೇಶ, ಊರಿನ ಅಭಿವೃದ್ಧಿಯ ದೃಷ್ಟಿಯಿಂದ ನೀರಿನ ತಾಣಗಳಾದ ಕೆರೆ-ಬಾವಿ, ಕಟ್ಟೆ-ಕುಂಟೆಗಳನ್ನು ಅವಿಭಾಜ್ಯ ಅಂಗಗಳಾಗಿ ನಿರ್ಮಿಸಿರುವುದು ಕಂಡುಬರುತ್ತದೆ. ಅಂತೆಯೇ ಕೆರೆ, ಏರಿ, ಕಟ್ಟೆ, ಕೊಳ್ಳ, ಕುಂಟೆ, ತೀರ್ಥ, ದೋಣಿ ಇತ್ಯಾದಿ ಸೂಚಿಪದಗಳು ಜಲಾಶಯದ ಪ್ರತ್ಯಯಗಳಾಗಿ ಕಂಡುಬರುತ್ತವೆ.

ವೇದಗಳಲ್ಲಿ ನೀರಾವರಿಗೆ ಸಂಬಂಧಿಸಿದ ಅನೇಕ ಶಬ್ದಗಳಿವೆ. ಉದಾ:- ‘ಬಾವಿ(ಕೂಪ), ‘ಕಾಲುವೆ’(ಕುಲ್ಯ), ‘ಸರೋವರ’(ಸರಸಿ) ಎಂಬ ಪದಗಳು ಮಹಾಭಾರತದ ಅನುಶಾಸನಿಕ

ಪರ್ವದಲ್ಲಿ ಕಂಡುಬರುತ್ತದೆ. ರಾಜನು ಮಾಡಬೇಕಾದ ಕೆಲವು ಪ್ರಮುಖ ಕರ್ತವ್ಯಗಳಲ್ಲಿ ಕೆರೆ, ಕಾಲುವೆ, ಬಾವಿಗಳನ್ನು ನಿರ್ಮಿಸುವಂತೆ ಹೇಳಲಾಗಿದೆ. ಅನೇಕ ಸಾಹಿತ್ಯ, ಪುರಾಣ, ಪ್ರಾಯೋಗಿಕಶಾಸ್ತ್ರ ಕೃತಿಗಳು, ವಿದೇಶಿ ಪ್ರವಾಸಿಗರ ಬರಹಗಳು ಕೆರೆಗಳ ನಿರ್ಮಾಣ ಕುರಿತು ಉಲ್ಲೇಖಿಸುತ್ತವೆ. ಅಷ್ಟೇ ಅಲ್ಲದೆ ಕೆರೆಗೆ ಸಂಬಂಧಿಸಿದಂತೆ ಪ್ರಾಚೀನ ಭಾರತದಲ್ಲಿ ಬಳಕೆಯಲ್ಲಿದ್ದ ವ್ಯವಸಾಯ ಪದ್ಧತಿ, ನೀರಾವರಿ ವ್ಯವಸ್ಥೆ ಮುಂತಾದವುಗಳ ಬಗ್ಗೆ ಪ್ರಸ್ತಾಪಿಸುತ್ತ ಕೆರೆಗಳ ನಿರ್ಮಾಣ, ಅವುಗಳ ಬಳಕೆ, ರಕ್ಷಣೆ, ಪೋಷಣೆಯ ಕುರಿತು ತಿಳಿಸಿವೆ.

"ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಂ ಮಾಡಿಸ
ಜ್ಜೆರೆಯೊಳ್ಸಿಲ್ಕದನಾಥರಂ ಬಿಡಿಸು ಮಿತ್ರರ್ಗ್ಗಂಬುಕೆಯ್ ನಂಬಿದ
ರ್ಗ್ಗೆರೆವೆಟಾಗಿರು ಶಿಷ್ಟರಂ ಪೊರೆಯೆನುತ್ತಿಯೆಂತೆಲ್ಲವಂ ಪಿಂದೆತಾ
ಯೆರೆದಳ್ವಾರೆವಂದು ತೊಟ್ಟು ಕಿವಿಯೊಳ್ಂ ಲಕ್ಷ್ಮೀಧರಾಮಾತ್ಯನಾ"

ಈ ಮೇಲೆ ಉಲ್ಲೇಖಿಸಿದ ಪದ್ಯವನ್ನು ವಿಜಯನಗರದ ಅರಸ ಪ್ರೌಢದೇವರಾಯನ(ಕ್ರಿ.ಶ. ೧೪೦೬-೧೪೨೨) ಮಂತ್ರಿ ಲಕ್ಷ್ಮೀಧರನು ಕೂಸಾಗಿದ್ದಾಗ ಅವನ ತಾಯಿ ಹಾಡಿ ಹಾಲೆರೆಯುತ್ತಿದ್ದಳೆಂದು ಹಂಪೆಯ ಕಡಲೆಕಾಳು ಗಣಪತಿ ಗುಡಿಯ ಮುಂದಿನ ಅಗಸೆಯಲ್ಲಿರುವ ಕ್ರಿ.ಶ. ೧೪೧೧ರ ಶಾಸನವು ತಿಳಿಸುತ್ತದೆ. ಈ ಶಾಸನದ ಹಿನ್ನೆಲೆಯಲ್ಲಿ ನಮ್ಮ ಪ್ರಾಚೀನರು ಸಮಾಜದ ಒಳತಿಗಾಗಿ ಕೆರೆ, ಬಾವಿ, ಛತ್ರಗಳನ್ನು ನಿರ್ಮಿಸುತ್ತಿದ್ದರು ಎಂಬುದನ್ನು ಗ್ರಹಿಸಬಹುದಾಗಿದೆ.[೨]

ಕ್ರಿ.ಶ. ಆರಂಭದ ಶತಮಾನಗಳಲ್ಲಿ ಕರ್ನಾಟಕವು ಅತೀ ಪ್ರಾಚೀನ ನೀರಾವರಿ ಯೋಜನೆಯನ್ನು ಅಳವಡಿಸಿಕೊಂಡಿತ್ತೆಂಬುದು ಶಿಲಾ ಶಾಸನಗಳಿಂದ ತಿಳಿಯುತ್ತದೆ. ಚಂದ್ರವಳ್ಳಿ ಕೆರೆ, ತಾಳಗುಂದ ಮತ್ತು ಗುಡ್ನಾಪುರ ಕೆರೆಗಳು ಚಿತ್ರದುರ್ಗ ಕದಂಬರ ಕಾಲದ ಕೆರೆಗಳಾಗಿವೆ. ಪ್ರಾಚೀನ ಕಾಲದಲ್ಲಿ ಬಾವಿಗಳನ್ನು ತೋಡಿಸುವುದು, ಕೆರೆಗಳನ್ನು ಕಟ್ಟಿಸುವುದು ಒಂದು ಪುಣ್ಯದ ಕಾರ್ಯವೆಂದು ಪರಿಗಣಿಸಲಾಗಿತ್ತು.

ಮಾನವನು ಮೊದಲಿಗೆ ವ್ಯವಸಾಯವನ್ನು ಪ್ರಾರಂಭಿಸಿದಾಗ ಮಳೆಯನ್ನು ನಂಬಿ, ವಿಫಲವಾಗಿ ನೀರು ಸಿಗುವ ಭಾಗವಾಗಿದ್ದ ನದಿಯನ್ನು ಆಶ್ರಯಿಸಿದ್ದನು. ಪರಿಸರದಲ್ಲಿ ಏರುಪೇರು ಉಂಟಾಗುತ್ತಿದ್ದ ಸಂದರ್ಭದಲ್ಲಿ ನೀರನ್ನು ಸಂಗ್ರಹ ಮಾಡಿ ಉಪಯೋಗ ಮಾಡಹತ್ತಿದ. ಮುಂದೆ ವ್ಯವಸಾಯಕ್ಕೆ ಉಪಯೋಗಿಸಲು ನೀರಿಗೆ ಒಡ್ಡು ಹಾಕಿ ಸಂಗ್ರಹ ಮಾಡಲು ಪ್ರಾರಂಭಿಸಿದ ನಂತರ ಇವುಗಳೇ ಕೆರೆಕುಂಟೆಗಳಾಗಿ ಉಗಮಗೊಂಡವು.

ಭಾರತದ ಪ್ರಾಚೀನ ಸಾಹಿತ್ಯವೆನಿಸಿಕೊಂಡ ವೇದಗಳಲ್ಲಿ ಬೇಸಾಯದ ಬಗ್ಗೆ ಉಲ್ಲೇಖಗಳಿವೆ. ಮನುಸ್ಮೃತಿಯಲ್ಲಿ ನಾಲೆಗಳಿಗೆ ಯಾರಾದರೂ, ಯಾವುದೇ ವಿಧವಾದ ಧಕ್ಕೆಯನ್ನುಂಟು ಮಾಡಿದಲ್ಲಿ ಅಂತಹವರಿಗೆ ಮರಣದಂಡನೆ ಶಿಕ್ಷೆಯನ್ನು ವಿಧಿಸಬೇಕೆಂದು ಹೇಳಿದ್ದಾನೆ.[೩]

## ಚಳ್ಳಕೆರೆ ಕಸಬಾ ಹೋಬಳಿಯ ಪ್ರಮುಖ ಕೆರೆಗಳು

ಚಳ್ಳಕೆರೆಯು ಚಿತ್ರದುರ್ಗ ಜಿಲ್ಲೆಯ ತಾಲ್ಲೂಕುಗಳಲ್ಲಿ ಪ್ರಮುಖವಾದಂತಹ ತಾಲ್ಲೂಕು ಮತ್ತು ಅದರ ಮುಖ್ಯ ಸ್ಥಳವಾಗಿದೆ. ಚಳ್ಳಕೆರೆ ತಾಲೂಕಿನಲ್ಲಿ ನಾಲ್ಕು ಹೋಬಳಿಗಳು ಕಂಡುಬರುತ್ತವೆ. ಪರಶುರಾಂಪುರ, ತಳಕು, ನಾಯಕನಹಟ್ಟಿ, ಕಸಬಾ ಎಂದು ವಿಭಾಗಿಸಲಾಗಿದೆ. ಚಳ್ಳಕೆರೆಯು ಕರ್ನಾಟಕದಲ್ಲಿಯೇ ಅತೀ ಕಡಿಮೆ ಮಳೆ ಬೀಳು ಪ್ರದೇಶವೆಂದು ಅಂಕಿ-ಅಂಶಗಳಿಂದ ತಿಳಿದುಕೊಳ್ಳಲಾಗಿದೆ. ಚಳ್ಳಕೆರೆ ಕಸಬಾ ಹೋಬಳಿಯು ಅಂದಿನಿಂದಲೂ ಕೃಷಿ ಪ್ರಧಾನವಾದ ಪ್ರದೇಶ. ಹೆಚ್ಚು ಇಲ್ಲಿನ ಜನರು ಕೃಷಿಯನ್ನು ಪ್ರಮುಖ ವೃತ್ತಿಯನ್ನಾಗಿ ಸ್ವೀಕರಿಸಿದ್ದಾರೆ. ಈ ಭಾಗದಲ್ಲಿ ವೇದಾವತಿ ನದಿ ಹರಿದರೂ ಯಾವುದೇ ರೀತಿಯ ಪ್ರಯೋಜನ ಕಂಡುಬರುವುದಿಲ್ಲ. ಆದ್ದರಿಂದ ಹಿಂದಿನಿಂದಲೂ ಪೂರೈಸುತ್ತಿರುವುದು ಇಲ್ಲಿನ ಕೆರೆಗಳು. ರಾಷ್ಟ್ರಕೂಟರ ಕಾಲದಿಂದ ಮೈಸೂರು ಒಡೆಯರ ಕಾಲದವರೆಗೆ ಇಲ್ಲಿ ಆಳ್ವಿಕೆ ಮಾಡಿದ ರಾಜರುಗಳು ದಂಡನಾಯಕರುಗಳು ಕೆರೆಗಳ ನಿರ್ಮಾಣ, ನಿರ್ವಹಣೆಗೆ ಹೆಚ್ಚು ಪ್ರಾಮುಖ್ಯತೆ ನೀಡುತ್ತಾ ಬಂದಿರುವುದು ಗಮನಾರ್ಹ. ಈ ಪ್ರದೇಶವು ಅತೀ ಕಡಿಮೆ ಮಳೆ  ಬೀಳುವ ಪ್ರದೇಶವೆಂದು ಗುರುತಿಸಿಕೊಂಡಿದ್ದರೂ ಸಹ ವರ್ಷದಲ್ಲಿ ನೈರುತ್ಯ ಮಾನ್ಸೂನ್ ಮಾರುತಗಳ ಕಾಲದಲ್ಲಿ. ಅಲ್ಪ ಸ್ವಲ್ಪ ೪ ತಿಂಗಳು ಬೀಳುವ ಮಾತ್ರ ನೀರನ್ನು ಸೂಕ್ತವಾಗಿ ಕೆರೆಗಳಲ್ಲಿ ಸಂಗ್ರಹಿಸಲಾಗುತ್ತದೆ. ಕಸಬಾ ಹೋಬಳಿಯಲ್ಲಿ ೧೧ ಕೆರೆಗಳಿವೆ. ಅದರಲ್ಲಿ ಅಧ್ಯಯನಕ್ಕೆ ಕಸಬಾದ ಕೆಲವು ಪ್ರಮುಖ ಕೆರೆಗಳನ್ನು ಕುರಿತು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಈ ಕೆರೆಯ ನೀರನ್ನು ವರ್ಷದ ಎಲ್ಲಾ ಕಾಲದಲ್ಲಿಯೂ ವ್ಯವಸಾಯ, ಗೃಹಬಳಕೆ ಕಾರ್ಯಗಳಿಗೆ ಬಳಸಿಕೊಳ್ಳಬೇಕಾಗಿರುವ ಅನಿವಾರ್ಯತೆ ಇಲ್ಲಿನ ಜನರಿಗಿದ್ದು ಆಳರಸರು ಹಿಂದಿನಿಂದಲೂ ಕೆರೆಗಳ ನಿರ್ಮಾಣ, ನಿರ್ವಹಣೆಗೆ ಸೂಕ್ತ ಪ್ರಾತಿನಿಧ್ಯ ನೀಡುತ್ತಾ ಬಂದಿದ್ದಾರೆ. ಇಲ್ಲಿನ ಕೆರೆಗಳು ಸರಪಳಿಯಂತೆ ನಿರ್ಮಾಣವಾಗಿದ್ದು ಒಂದು ಕರೆ ತುಂಬಿದರೆ ಹೆಚ್ಚುವರಿ ನೀರು ಕೋಡಿಯಿಂದ ಹೊರಬಂದು ಮತ್ತೊಂದು ಕೆರೆಯನ್ನು ಸೇರುವಂತೆ ತಂತ್ರಜ್ಞಾನವನ್ನು ನಿರ್ಮಾಣದಲ್ಲಿ ಬಳಸಿಕೊಳ್ಳಲಾಗಿದೆ.

ಈ ಪರಿಸರದ ಕೆರೆಗಳನ್ನು ವ್ಯವಸಾಯಕ್ಕೆ ನೀರನ್ನು ಒದಗಿಸುವುದು ಒಂದು ಉದ್ದೇಶವಾದರೆ ಹಾಗೂ ದಿನದ ಗೃಹಬಳಕೆಗೆ ನೀರನ್ನು ಬಳಸಿಕೊಳ್ಳುತ್ತಿರುವುದು ಸಾಮಾನ್ಯವಾಗಿ ಪರಿಸರದಲ್ಲಿ ಕಂಡುಬಂದಿದೆ.

### ದೊಡ್ಡೇರಿ ಕೆರೆ

ದೊಡ್ಡೇರಿ ಕೆರೆಯು ಚಳ್ಳಕೆರೆ ತಾಲ್ಲೂಕಿನ ಸೂಕ್ಷ್ಮ ನವ ಬೃಹತ್‌ಶಿಲಾಯುಗದ ನೆಲೆ ಹಾಗೂ ಐತಿಹಾಸಿಕ ಗ್ರಾಮ. ಚಳ್ಳಕೆರೆ ತಾಲ್ಲೂಕು ಕೇಂದ್ರದಿಂದ ೬ ಕಿ.ಮೀ. ದೂರದಲ್ಲಿರುವ ಗ್ರಾಮವೇ ದೊಡ್ಡೇರಿ. ಇದರ ಪಕ್ಕದಲ್ಲಿರುವ ಇನ್ನೊಂದು ಗ್ರಾಮ ಡಿ. ಉಪ್ಪಾರಹಟ್ಟಿ. ಈ ಎರಡೂ ಗ್ರಾಮಗಳ ಮಧ್ಯೆ ಇರುವ ಗ್ರಾಮವೇ ಹಳೇ ದೊಡ್ಡೇರಿ. ಈ ದೊಡ್ಡೇರಿ ಗ್ರಾಮವು

೧೮೮೨ ರವರೆಗೆ ತಾಲ್ಲೂಕು ಕೇಂದ್ರವಾಗಿತ್ತು. ಇದೊಂದು ಐತಿಹಾಸಿಕ ಸ್ಥಳವಾಗಿದ್ದು, ಪಾಳೇಗಾರರು ಆಳಿದ ಪ್ರದೇಶವಾಗಿದೆ. ಇಲ್ಲಿ ಈಗಲೂ ಸಹ ಅನೇಕ ಕೋಟೆ ಕೊತ್ತಲಗಳ ಅವಶೇಷಗಳು, ಬುರುಜಗಳನ್ನು ಕಾಣಬಹುದಾಗಿದೆ.

ಕ್ರಿ.ಶ. ೧೭೬೦-೧೭೬೬ರವರೆಗೆ ದೊಡ್ಡೇರಿ ಕದನವು ಮೊಗಲರಿಗೂ, ಮರಾಠರಿಗೂ ನಡೆಯಿತು. ಈ ಸಂದರ್ಭದಲ್ಲಿ ದೊಡ್ಡೇರಿ ಕೋಟೆಯಲ್ಲಿದ್ದ ಮೊಗಲರು ಇಲ್ಲಿ ಭಾರಿ ಕಂದಕ ಕೋಟೆ ಕೊತ್ತಲಗಳನ್ನು ನಿರ್ಮಿಸಿದ್ದರಂತೆ. ಈಗಲೂ ಅವಶೇಷಗಳನ್ನು ಕಾಣಬಹುದಾಗಿದೆ. ಈ ಸ್ಥಳದಲ್ಲಿ ಹಿಂದೆ ಕಾಗದದ ಕಾರ್ಖಾನೆ ಇದ್ದು, ದೊಡ್ಡೇರಿ (ಕಾಗದ) ಎಂದೇ ಖ್ಯಾತಿ ಪಡೆದಿತ್ತು. ಮತ್ತು ಕಪ್ಪು ಷಾಯಿಗೆ ಪ್ರಸಿದ್ಧವಾಗಿತ್ತು. ಈ ಗ್ರಾಮದಲ್ಲಿ ಚಾರಿತ್ರಿಕ ದೇವಾಲಯಗಳು, ಅನೇಕ ವೀರಗಲ್ಲುಗಳೂ ಸಹ ಕಂಡುಬರುತ್ತದೆ.[೪]

ದೊಡ್ಡೇರಿ ಕೆರೆಯು ದೊಡ್ಡೇರಿ ಪಕ್ಕದಲ್ಲಿರುವ ಉಪ್ಪಾರಹಟ್ಟಿಯಿಂದ ಕೆಂಚವೀರನಹಳ್ಳಿಗೆ ತೆರಳುವ ಮಾರ್ಗದಲ್ಲಿ ಕಂಡುಬರುತ್ತದೆ. ಈ ಕೆರೆಗೆ ಗರಣಿಹಳ್ಳ, ತಾಯಿಹಳ್ಳ, ದೊಡ್ಡಹಳ್ಳ, ಬುರುಜನಕಟ್ಟೆ ಹಳ್ಳಗಳಿಂದ ನೀರು ಬಂದು ಸಂಗ್ರಹವಾಗುತ್ತದೆ. ಇದು ಸಹ ದೊಡ್ಡ ಕೆರೆಯಾಗಿದ್ದು ವಿಶಾಲವಾದ ಅಂಗಳವನ್ನು ಹೊಂದಿದೆ. ಎರಡು ದಂಡೆಯೂ ಮೇಲೆಯೂ ಸಹ ಎರಡು ತೂಬುಗಳನ್ನು ಹೊಂದಿದೆ. ದೊಡ್ಡ ತೂಬಿನ ನೀರು ಹೋಗಲು ಚಕ್ರಗಟ್ಟೆಯನ್ನು ಕಟ್ಟಿ ಅದರಿಂದ ಮುಖ್ಯ ಕಾಲುವೆಗೆ ನೀರು ಹರಿಯುವಂತೆ ಮಾಡಲಾಗಿದೆ. ಕೆರೆಯ ಏರಿಯು ಅತ್ಯಂತ ಉದ್ದವಾಗಿದೆ. ಚಿಕ್ಕ ತೂಬಿನ ಹತ್ತಿರ ಸ್ತ್ರೀಯ ಶಿಲೆ ಇದೆ ಹಾಗೂ ಪಾದಗಳ ಶಿಲ್ಪಗಳನ್ನು ಕೆತ್ತಲಾಗಿದೆ. ಆ ಪಾದಗಳಿಗೆ ಸರ್ಪವು ಸುತ್ತುವರಿದಿದೆ. ಈ ಕೆರೆಯ ಮೊದಲು ೨ ಕೋಡಿಗಳನ್ನು ಹೊಂದಿತ್ತು. ನಂತರ ದೊಡ್ಡ ಕೋಡಿಯನ್ನು ಮುಚ್ಚಿ ಹಾಕಿ ಚಿಕ್ಕ ಕೋಡಿಯಿಂದ ನೀರು ಹೊರ ಹೋಗಲು ವ್ಯವಸ್ಥೆ ಮಾಡಲಾಗಿದೆ. ಈ ಕೆರೆಯ ಕೋಟೆಯ ನಿವೇಶನಕ್ಕೆ ಹೊಂದಿಕೊಂಡಿರುವ ವಿಶಾಲವಾದ 'ದೊಡ್ಡೇರಿ ಕೆರೆ'ಯ ಮುಂಭಾಗದ ಪರಿಸರದಲ್ಲಿ ದೇವಾಲಯದ ಅವಶೇಷ, ಶಾಸನೋಕ್ತ ವೀರಗಲ್ಲು, ವೀರ-ಮಾಸ್ತಿಗಲ್ಲು, ಬಿಡಿಶಿಲ್ಪ ಇತ್ಯಾದಿ ಕಂಡುಬರುತ್ತದೆ. ದೊಡ್ಡೇರಿ ಕದನ ನಡೆದ ಸಂದರ್ಭದಲ್ಲಿ ಹತರಾದ ಕೆಲವು ಸ್ಥಳೀಯ ಯೋಧರ ನೆನಪಿಗಾಗಿ ಹಾಕಿಸಿರುವ ಶಿಲೆಗಳೂ ಇಲ್ಲಿರಬಹುದು. ಒಂದೆರಡರ ವಿನಾಃ ಉಳಿದ ಸ್ಮಾರಕ ಶಿಲೆ ಹಾಗೂ ಶಿಲ್ಪಗಳು ಮುಕ್ಕಾಗಿವೆ. ಕೋಟೆ ನಿವೇಶನವು ಕೆರೆಗೆ ಹೊಂದಿಕೊಂಡಂತಿರುವುದರಿಂದ, ಹಿಂದೊಮ್ಮೆ ಈ ಕೆರೆಯ ನೀರನ್ನೇ ಕೋಟೆಯ ಕಂದಕಕ್ಕೆ ಹಾಯಿಸುತ್ತಿದ್ದಿರಬೇಕು. ಇದರ ಕುರುಹು ಸಹ ಗೋಚರಿಸುತ್ತದೆ. ಸುಮಾರು ಒಂದು ಸಾವಿರ ಎಕರೆ ಅಚ್ಚುಕಟ್ಟು ಹೊಂದಿರುವ ಈ ಕೆರೆಯ ಏರಿಯ ಮೇಲೆ ಸಪ್ತಮಾತೃಕೆಯರ ಶಿಲ್ಪ ಮತ್ತು ನಂದಿ ವಿಗ್ರಹಗಳಿವೆ. ಈ ಕೆರೆ ಏರಿಯ ಮುಂದೆ ಕೋಟೆಯ ಹೊರವಲಯದಲ್ಲಿ ಜನವಸತಿಯ ಕುರುಹಗಳು ಕಂಡುಬರುವುದರೊಡನೆ ಕದನದಲ್ಲಿ ಮಡಿದವರ ಸ್ಮಾರಕ ಶಿಲೆಗಳೂ ಇವೆ. ದೊಡ್ಡೇರಿ ಕದನ ಈ ಪ್ರದೇಶದಲ್ಲಿಯೂ ನಡೆದಿರಬೇಕು.[೫] 'ದೊಡ್ಡೇರಿ ಜಗಳ'

ಲಾವಣಿಯಲ್ಲಿ ಕೆರೆಯೊಂದರ ಬಳಿ ಕದನ ನಡೆದ ಸಂದರ್ಭದಲ್ಲಿ ಸೂಕ್ಷ್ಮ ಚಿತ್ರಣವಿದೆ. ಕೆರೆಕಟ್ಟೆಯ ಮೇಲೆ ಹಾಗೂ ಏರಿಯ ಹಿಂದೆ ಖಾಸಿಂಖಾನನ ಸೈನಿಕರನ್ನು ದುರ್ಗದವರು ಓಡಾಡಿಸಿಕೊಂಡು, ಗದುಬಿ(ಮಿ)ಕೊಂಡು ಹಾರಾಡಿಕೊಂಡು ಕಡಿದ ಬಗೆಗೆ ರೋಚಕ ವಿವರಣೆಯಿದೆ. ಆದ್ದರಿಂದ ಕೋಟೆಯ ಬಳಿ ಮಾತ್ರವಲ್ಲದೆ, ದೊಡ್ಡೇರಿ ಕೆರೆ ಬಳಿಯೂ ಈ ಕದನ ನಡೆದಿರುವ ಸಾಧ್ಯತೆಯುಂಟು.

ಈ ಕೆರೆಯು ಬಹಳಷ್ಟು ಊಳು ತುಂಬಿದೆ. ಇದನ್ನು ತೋಡಿಸುವ ಕಾರ್ಯ ಆಗಬೇಕಿದೆ. ಕೆರೆಯ ತುಂಬೆಲ್ಲಾ ಸೀಮೆ ಜಾಲಿ ಗಿಡಗಳು ಅವೃತ್ತವಾಗಿದೆ. ಈ ಕೆರೆ ಕೋಡಿ ಬಿದ್ದ ನೀರು ಗರಣಿಯ ಮುಖಾಂತರ ರಾಣಿ ಕೆರೆಗೆ ಸೇರುತ್ತದೆ.

**ದೊಡ್ಡೇರಿ ಕೆರೆಗೆ ಸಂಬಂಧಿಸಿದ ತಾಂತ್ರಿಕ ಮಾಹಿತಿ**

೧. ಕೆರೆಯ ಹೆಸರು - ದೊಡ್ಡೇರಿ ಕೆರೆ

೨. ಕೆರೆ ನಿರ್ಮಾಣವಾದ ವರ್ಷ - ೧೮೮೧

೩. ನದಿ ಪಾತ್ರ - ವೇದಾವತಿ

೪. ನಿರ್ಮಾಣ ವೆಚ್ಚ - ೨.೬೯ ಲಕ್ಷ

೫. ಜಲಾನಯನ ಪ್ರದೇಶ - ೨೧.೫೦(ಚ.ಕಿ.ಮೀ.ಗಳಲ್ಲಿ)

೬. ಜಲಾವೃತ್ತ ಪ್ರದೇಶ - ೨೭೯.೦೦

೭. ಬೆಳೆ ಪದ್ಧತಿ - ರಾಗಿ, ಜೋಳ, ಭತ್ತ, ಮೆಕ್ಕೆಜೋಳ

೮. ಕೋಡಿಯ ಮಾದರಿ - ಸ್ಲೋಪಿಂಗ್ ಎಪ್ರಾನ್

**೨. ರಾಣಿಕೆರೆ**

ಚಳ್ಳಕೆರೆಯಿಂದ ೧೨ ಕಿ.ಮೀ. ದೂರದಲ್ಲಿರುವ ಮೀರಾಸಾಬಿಹಳ್ಳಿಯಲ್ಲಿ ರಾಣಿಕೆರೆ ಕಂಡುಬರುತ್ತದೆ. ಈ ಗ್ರಾಮದಲ್ಲಿ ಮೀರಾಕ್‌ಸಾದಿಕ್ ಎನ್ನುವ ಮುಸಲ್ಮಾನನ ಹೆಸರಿನಲ್ಲಿ ಕರೆಯಲಾಗಿದೆ ಎಂದು ಹೇಳುತ್ತಾರೆ. ಹಲವು ಕೋಮಿನ ಜನರು ವಾಸವಾಗಿದ್ದು, ಕೋಮು ಸಾಮರಸ್ಯವನ್ನು ಇಲ್ಲಿ ಕಾಣಬಹುದಾಗಿದೆ. ರಾಣಿ ಇಲ್ಲಿ ಕೆರೆಯನ್ನು ಕಟ್ಟಿಸಿದ್ದರಿಂದ ಇದಕ್ಕೆ ರಾಣಿಕೆರೆ ಎಂದು ಹೆಸರಾಯಿತು.

ಈ ರಾಣಿಕೆರೆಯನ್ನು ಮೈಸೂರಿನ ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ್ ಅವರು ತಮ್ಮ ಪತ್ನಿಯ ಸ್ಮರಣಾರ್ಥವಾಗಿ ಈ ಕೆರೆಯನ್ನು ೧೯೦೭ರಲ್ಲಿ ನಿರ್ಮಿಸಿದರಂತೆ.[೬] ಈ ಕೆರೆಗೆ ೧೯೦೮ರಲ್ಲಿ ಮೇಲು ಸೇತುವೆ ನಿರ್ಮಾಣವಾಯಿತೆಂದು ತಿಳಿಸುತ್ತಾರೆ. ಈ ಕೆರೆಗೆ ಉತ್ತರಾಭಿಮುಖವಾಗಿ ಗರಣಿಹಳ್ಳ ದುರ್ಗಾವರದ ಹಳ್ಳ ಬೊಮ್ಮ

ಸಮುದ್ರ, ಭರಮಸಾಗರದ ಹಳ್ಳಗಳು, ವೇದಾವತಿ ನದಿಯ ಕಾಲುವೆಗಳು ಬರುವುದರಿಂದ ಹೆಚ್ಚು ನೀರು ಸಂಗ್ರಹವಾಗುತ್ತದೆ. ಈ ಕೆರೆಯ ಸ್ವಲ್ಪ ದೂರದಲ್ಲಿರುವ ಆನೆಕಟ್ಟಸರ ಎಂಬ ಸ್ಥಳವಿದೆ. ಆನೆಗಳನ್ನು ಕಟ್ಟಿ ಮೇಯಿಸುತ್ತಿದ್ದರಿಂದ ಇದಕ್ಕೆ ಆನೆಕಟ್ಟೆಸರ ಎಂಬ ಹೆಸರು ಬಂದಿದೆ.[೭]

ಈ ಕೆರೆಯು ಅಂಗಳ ಅತ್ಯಂತ ವಿಶಾಲವಾಗಿದ್ದು, ಬಹಳಷ್ಟು ನೀರು ಸಂಗ್ರಹವಾಗುತ್ತದೆ. ಈ ಕೆರೆಯು ೨೦೬೨ ಎಕರೆ ಪ್ರದೇಶಕ್ಕೆ ನೀರನ್ನು ಒದಗಿಸುತ್ತದೆ. ರಾಣಿಕೆರೆಯು ಊರಿನ ಹೊರಗಡೆ ಕಂಡುಬಂದಿದೆ. ಅದು ಇಲ್ಲಿಯ ಜನರ ಜೀವಾಳವಾಗಿದೆ. ಈ ನೀರನ್ನು ಜನರು ಕುಡಿಯಲು ಮತ್ತು ಕೃಷಿಗೆ ಉಪಯೋಗಿಸುತ್ತಾರೆ. ಕೆರೆಯು ಮಣ್ಣಿನ ಏರಿಯನ್ನು ಹೊಂದಿದ್ದು, ಒಳಭಾಗವು ದಪ್ಪ-ದಪ್ಪ ಕಲ್ಲುಗಳಿಂದ ನಿರ್ಮಿಸಲ್ಪಟ್ಟಿದ್ದು, ಹೊರಭಾಗವು ಮಣ್ಣಿನ ಏರಿಯನ್ನು ಒಳಗೊಂಡಿದೆ. ಈ ಕೆರೆಗೆ ಹೊಂದಿಕೊಂಡಂತೆ ಎರಡು ತೂಬು ಮತ್ತು ಎರಡು ಕೋಡಿಗಳನ್ನು ನಿರ್ಮಾಣ ಮಾಡಿದ್ದಾರೆ. ಈ ಗ್ರಾಮದಲ್ಲಿ ಸುಮಾರು ೫೦೦೦ ಸಾವಿರ ಜನಸಂಖ್ಯೆನ್ನು ಹೊಂದಿದೆ ಬರಗಾಲ ಕಾಮಗಾರಿ ಯೋಜನೆಯಡಿಯಲ್ಲಿ ಈ ಕೆರೆಯ ಹೊಳೆತ್ತಲಾಗಿದೆ. ಈ ಕೆರೆ ಕೋಡಿ ಬಿದ್ದ ನಂತರ ಇದರ ನೀರು ಆಂಧ್ರದ ಬೋರನ ತಿಪ್ಪೆ ಡ್ಯಾಂಗೆ ಸೇರುತ್ತದೆ. ಮಳೆಗಾಲದಲ್ಲಿ ರಾಣಿಕೆರೆಯು ಮೈದುಂಬಿ ಹರಿಯುತ್ತದೆ.

ಈ ಕೆರೆಗೆ ಜನಪದರು ಹಾಡನ್ನು ಕಟ್ಟಿದ್ದಾರೆ.

"ಊರ ಮುಂದೆ
ಹಸನಾದ ಶಿವಗಂಗೆ
ಹರಿದಾಳೇ! ನೋಡಬನ್ನಿ
ನೋಡಬನ್ನಿ"

ಎಂದು ರಾಣಿಕೆರೆಯ ಮೇಲೆ ಜನಪದೀಯರು ಕೆರೆಯನ್ನು ಹಾಡಿ ಹೊಗಳಿದ್ದಾರೆ.[೮]

**ರಾಣಿಕೆರೆ ಸಂಬಂಧಿಸಿದ ತಾಂತ್ರಿಕ ಮಾಹಿತಿ**

೧. ತಾಲ್ಲೂಕು - ಚಳ್ಳಕೆರೆ

೨. ಹೋಬಳಿ - ಕಸಬಾ

೩. ಗ್ರಾಮಪಂಚಾಯಿತಿ - ಮೀರಾಸಾಬಿಹಳ್ಳಿ

೪. ಗ್ರಾಮ - ಮೀರಾಸಾಬಿಹಳ್ಳಿ

೫. ಕೆರೆಯ ಹೆಸರು - ರಾಣಿಕೆರೆ

೬. ಕೆರೆಯ ನಿರ್ಮಾಣವಾದ ವರ್ಷ - ೧೯೦೭

೭. ನದಿ ಪಾತ್ರ - ವೇದಾವತಿ

೮. ನಿರ್ಮಾಣ ವೆಚ್ಚ - ೨.೬೯ ಲಕ್ಷ

೯. ಕೆರೆಯ ಏರಿಯ ಮಟ್ಟ - ೧೨.೦೦

೧೦. ಜಲಾನಯನ ಪ್ರದೇಶ - ಅ. ಸ್ವತಂತ್ರ(ಚ.ಕಿ.ಮೀ.ಗಳಲ್ಲಿ) - ೧೫೭.೩೮

ಆ. ಸಂಯುಕ್ತ(ಚ.ಕಿ.ಮೀ.ಗಳಲ್ಲಿ) - ೭೦೨.೮

೧೧. ಜಲಾವೃತ್ತ ಪ್ರದೇಶ - ೫೮೨.೭೬

೧೨. ಕೋಡಿಯ ಮಾದರಿ - ಸ್ಲೋಪಿಂಗ್

೧೩. ಬೆಳೆ ಪದ್ಧತಿ - ಭತ್ತ, ರಾಗಿ, ಹತ್ತಿ, ಮೆಕ್ಕೆಜೋಳ, ಈರುಳ್ಳಿ

೧೪. ಎಡದಂಡೆ ಕಾಲುವೆ - ೭.೪೦

೧೫. ಬಲದಂಡೆ ಕಾಲುವೆ - ೮.೮೦

೧೬. ಕೆರೆಯ ನೀರಗಂಟೆ -

## ೩. ಸಾಣಿಕೆರೆ

ಚಳ್ಳಕೆರೆ ತಾಲ್ಲೂಕು ಕೇಂದ್ರದಿಂದ ದಕ್ಷಿಣ ೧೪ ಕಿಲೋಮೀಟರ್ ದೂರದಲ್ಲಿರುವ ಕಂದಾಯ ಗ್ರಾಮ ವಿಜನಯಗರ ಅರಸರ ಆಳ್ವಿಕೆಗೆ ಸೇರಿದ ಕೋಟೆ ಕೊತ್ತಲುಗಳು, ಶಾಸನ ಆಧಾರಗಳಿವೆ. ಪಾಳೇಗಾರರ ಆಯುಧಗಳಿಗೆ ಕತ್ತಿ ಕಠಾರಿಗಳಿಗೆ ಸಾಣೆ ಹಿಡಿಯಲು ಈ ಗ್ರಾಮದಲ್ಲಿ ವಿಶೇಷ ಸ್ಥಾನವಿತ್ತಂತೆ. ಯಾರಿಗೂ ತಿಳಿಯದ ಒಂದು ಗುಪ್ತ ನೆಲಮಾಳಿಗೆ ಇತ್ತಂತೆ. ೧೬೭೫ರಲ್ಲಿ ಚಿತ್ರದುರ್ಗ ಪಾಳೆಯಗಾರ ಅರಸರಲ್ಲಿ ಒಬ್ಬರಾದ ಮತ್ತೀ ತಿಮ್ಮಣ್ಣನಾಯಕನು ಆಳ್ವಿಕೆ ನಡೆಸಿದ್ದು.

ಈ ಕೆರೆಯ ಏರಿ ಮೇಲೆ ಒಂದೇ ಶಿಲಾಪಟ್ಟಿಕೆಯಲ್ಲಿ ಮೂರು ಪ್ರಾಣಿಗಳ ಶಿಲ್ಪವನ್ನು ಕಾಣಬಹುದಾಗಿದೆ. ಅದರಲ್ಲಿ ಒಂದನೆಯ ಶಿಲ್ಪವು ಪ್ರಾಣಿಯ ದೇಹ ಹಾಗೂ ಮನುಷ್ಯನ ತಲೆಯನ್ನು ಹೊಂದಿದ್ದು, ಎಡಗಾಲನ್ನು ಮೇಲಕ್ಕೆತ್ತಿದೆ. ಎರಡನೆಯ ಶಿಲ್ಪದಲ್ಲಿ ವ್ಯಕ್ತಿ ಕುದುರೆಯ ಮೇಲೆ ಸವಾರಿ ಮಾಡುತ್ತಿರುವ ಶಿಲ್ಪ ಹಾಗೂ ೩ನೇ ಶಿಲ್ಪ ಸಿಂಹವಾಗಿದ್ದು ಅದು ಸವಾರಿ ಮಾಡುತ್ತಿರುವ ವೀರನ ಕಡೆಗೆ ತನ್ನ ಮುಖವನ್ನು ಮಾಡಿದ್ದು, ತನ್ನ ಮುಂದಿನ ಬಲಗಾಲನ್ನು ಆ ವೀರನ ಮೇಲೆ ಆಕ್ರಮಣ ಮಾಡುವಂತೆ ಮೇಲಕ್ಕೆತ್ತಿದೆ.[೯]

ಈ ಕೆರೆಯನ್ನು ಸಾಣಪ್ಪನಾಯಕನು ಚಿತ್ರದುರ್ಗ ಅರಸರ ಮತ್ತು ನಿಡಗಲ್ಲು ಪ್ರಾಂತ್ಯದ ಅರಸರ ಸಹಕಾರದಿಂದ ಸಾಣಿಕೆರೆಯನ್ನು ನಿರ್ಮಾಣ ಮಾಡಿದ ಊರಿನ ನೆಚ್ಚಿನ ರಾಜನಾಗಿದ್ದರಿಂದ ಊರಿಗೆ ಆತನ ಹೆಸರಿನಿಂದ ಸಾಣಪ್ಪ ನಾಯಕನಕೆರೆ ಎಂಬುದಾಗಿ ಕರೆಯುತ್ತಿದ್ದು, ಕ್ರಮೇಣ ಸಾಣಿಕೆರೆ ಎಂದು ಕರೆಯುತ್ತಾರೆ.

ಸಾಣಿಕೆರೆಯ ನೈರುತ್ಯ ದಿಕ್ಕಿಗೆ ಸಾಣಪ್ಪ ನಾಯಕನು ನಿರ್ಮಿಸಿದ ದೊಡ್ಡಕೆರೆ, ಉತ್ತರ ದಿಕ್ಕಿಗೆ ೩ ಕಿಲೋಮೀಟರ್ ದೂರದಲ್ಲಿರುವ ಆಪ್ತಿ ರಂಗಪ್ಪನ ಚಿಕ್ಕಕೆರೆ ಇದೆ. ಈ ಕೆರೆಯು ಗ್ರಾಮದ ನೈರುತ್ಯ ಭಾಗದಲ್ಲಿದೆ. ಈ ಕೆರೆಗ ಕಲ್ಲಹಳ್ಳಿ, ಮಧುರೆ ಕೆರೆ, ಕೋಡಿ ಬಿದ್ದ ನಂತರ, ನೀರು ದೊಡ್ಡ ಹಳ್ಳದ ಮೂಲಕ ಬಂದು ಸೇರುತ್ತದೆ. ವಿಶಾಲವಾದ ಕೆರೆಯ ಅಂಗಳವನ್ನು ಹೊಂದಿದೆ. ಎರಡು ತೂಬುಗಳನ್ನು ಹೊಂದಿದೆ ಮತ್ತು ಎರಡೂ ಕೋಡಿಗಳನ್ನು ಹೊಂದಿದೆ. ಅದು ಇಲ್ಲಿಯ ಜನರ ಜೀವಾಳವಾಗಿದೆ. ಊರಿನ ಹೊರಗಡೆ ಕಂಡುಬಂದಿದೆ. ಅಲ್ಲಿನ ನೀರನ್ನು ಜನರು ಕುಡಿಯಲು ಮತ್ತು ಕೃಷಿಗೆ ಉಪಯೋಗಿಸುತ್ತಾರೆ. ಕೆರೆಯು ಮಣ್ಣಿನ ಏರಿಯನ್ನು ಹಾಗೂ ಒಳಭಾಗವು ದಪ್ಪ ದಪ್ಪ ಕಲ್ಲುಗಳಿಂದ ನಿರ್ಮಿಸಲ್ಪಟ್ಟಿದ್ದು, ಹೊರಭಾಗವು ಮಣ್ಣಿನ ಏರಿಯನ್ನು ಒಳಗೊಂಡಿದೆ.

### ಕೆರೆಯ ನೀರು ಹೊರ ಹೋಗುವ ಹಳೆಯ ತೂಬು

ಕೆರೆಯ ವಾಯುವ್ಯ ಮೂಲೆಯಲ್ಲಿ ಕೆರೆಯ ನೀರು ಅಚ್ಚುಕಟ್ಟು ಪ್ರದೇಶಕ್ಕೆ ಹೊರ ಹೋಗುವ ಹಳೆಯ ತೂಬು. ಈ ಪ್ರದೇಶದಲ್ಲಿ ಹಳೆಯ ಊರು ಇದ್ದು, ಕೆರೆ ಏರಿ ನಿರ್ಮಾಣವಾದ ಮೇಲೆ ಕೆರೆ ಏರಿ ಒಡೆದು ನೀರು ಏರಿಯ ಹಿಂಬದಿಯಲ್ಲಿದ್ದ ಊರ ಒಳಗೆ ನುಗ್ಗಿದ್ದರಿಂದ, ಈ ಊರನ್ನು ಪ್ರಸ್ತುತ ಇರುವ ಜಾಗಕ್ಕೆ ಸ್ಥಳಾಂತರಿಸಲಾಗಿದೆ. ಈ ತೂಬಿನಿಂದ ನೀರು ಸರಿಯಾಗಿ ಸರಬರಾಜಾಗುತ್ತಿರಲಿಲ್ಲ. ಆದ ಕಾರಣದಿಂದ ಈ ತೂಬನ್ನು ಮುಚ್ಚಿ, ಈಶಾನ್ಯ ದಿಕ್ಕಿನಲ್ಲಿ ಹೊಸ ತೂಬನ್ನು ನಿರ್ಮಾಣ ಮಾಡಿದ್ದಾರೆ. ಹೊಸ ತೂಬನ್ನು ನಿರ್ಮಾಣ ಮಾಡಲು ಪ್ರಮುಖ ಕಾರಣವೆಂದರೆ ಹಳೆಯ ತೂಬಿನ ಒಳಗಡೆ ಅಡ್ಡಗತ್ತರಿಯನ್ನು ಅಳವಡಿಸಿದ್ದರಂತೆ, ನೀರು ತೂಬಿನ ಮೂಲಕ ಹೋಗುವಾಗ ಮೀನುಗಳು ಕತ್ತರಿ ಬಾಯಿಗೆ ಸಿಕ್ಕು ತುಂಡಾಗುತ್ತಿದ್ದವು ಮತ್ತು ಕೆರೆ ಏರಿನಿಂದ ಈ ತೂಬು ಸುಮಾರು ೧೫ ಅಡಿ ಇರುವುರಿಂದ ನೀರಿನಲ್ಲಿ ಈಜುಕೊಂಡು ಹೋಗಿ ತೂಬಿನ ಕಟ್ಟಡದ ಬಳಿ ಅಡ್ಡವಾಗಿರುವ ಗುಂಡನ್ನು ತೆಗೆಯಬೇಕಿತ್ತು. ಆ ಗುಂಡು ತೆಗೆದಾಗ ನೀರು ಹೋಗುತ್ತಿದ್ದವು.[೧೦]

ಒಮ್ಮೆ ಮಧ್ಯ ವಯಸ್ಸಿನ ವ್ಯಕ್ತಿ ಕಾಲುವೆಗೆ ನೀರು ಹರಿಸಲು ತೂಬಿನ ಗುಂಡು ಸರಿಸುವಾಗ ನೀರಿನ ಸಳೆಯುವಿಕೆಯಿಂದ ನೀರಿನ ಜೊತೆ ಆ ವ್ಯಕ್ತಿಯೂ ಹೋಗಿ ಕತ್ತರಿ ಬಾಯಿಗೆ ಸಿಕ್ಕು ಎರಡು ತುಂಡಾಗಿ ಆಚೆ ಬಂದಿದ್ದನಂತೆ. ಆಗಿನಿಂದ ಈ ತೂಬನ್ನು ಬಳಸುವುದನ್ನು ಬಿಟ್ಟು ಹೊಸ ತೂಬು ನಿರ್ಮಾಣ ಮಾಡಿದ್ದರು.

### ಹೊಸ ತೂಬಿನ ನಿರ್ಮಾಣ

ಹೊಸ ತೂಬಿನಲ್ಲಿ ಮರದ ಕೊರಡನ್ನು ತೂಬಿಗೆ ಜೋಡಿಸಿ ಕಬ್ಬಿಣದ ಸರಪಳಿ ಅಳವಡಿಸಿದ್ದಾರೆ. ಕೆರೆ ಏರಿಯ ಹಿಂದೆ ಹೊಸ ತೂಬಿಗೆ ಸೇತುವೆ ನಿರ್ಮಿಸಲಾಗಿದೆ. ಎರಡೂ ತೂಬುಗಳನ್ನು ದೊಡ್ಡ ದೊಡ್ಡ ಕಲ್ಲು ಕಂಬಗಳನ್ನು ಬಳಸಿಕೊಂಡು ನಿರ್ಮಿಸಲಾಗಿದೆ.

ಸುಮಾರು ೩೦ ಅಡಿಗೂ ಮೇಲ್ಪಟ್ಟು ನಾಲ್ಕು ಕಂಬಗಳನ್ನು ನೆಡಲಾಗಿದೆ. ಇದನ್ನು ನಿರ್ಮಿಸಿರುವುದು ತುಂಬಾ ಶ್ರಮದ ಸಾಧನೆ ಆಗಿನ ಕಾಲದಲ್ಲಿ ಯಂತ್ರಗಳ ಸಹಾಯವಿಲ್ಲದೇ, ಪ್ರಾಣಿಗಳು ಮತ್ತು ಮನುಷ್ಯರ ಬುದ್ಧಿ ಮತ್ತು ಶ್ರಮದಿಂದಾಗಿ ನಿರ್ಮಿಸಿರುವುದು ತುಂಬಾ ಶ್ಲಾಘನೀಯವಾದುದು. ಈ ಕೆರೆಯ ಹೂಳೆತ್ತಲಾಗಿದೆ. ಈ ಕೆರೆ ಕೋಡಿ ಬಿದ್ದ ನಂತರ ಇದರ ನೀರು ದೊಡ್ಡೇರಿ ಕೆರೆಗೆ ಸೇರುತ್ತದೆ.

**ಸಾಣಿಕೆರೆಗೆ ಸಂಬಂಧಿಸಿದ ತಾಂತ್ರಿಕ ಮಾಹಿತಿ**

೧. ತಾಲ್ಲೂಕು - ಚಳ್ಳಕೆರೆ

೨. ಹೋಬಳಿ - ಕಸಬಾ

೩. ಗ್ರಾಮ ಪಂಚಾಯ್ತಿ - ಸಾಣಿಕೆರೆ

೪. ಗ್ರಾಮ - ಸಾಣಿಕೆರೆ

೫. ಜಲಾನಯನ ಪ್ರದೇಶ - ಅ. ಸ್ವತಂತ್ರ(ಚ.ಕಿ.ಮೀ.ಗಳಲ್ಲಿ) - ೧೮.೫೦

೬. ಜಲಾವೃತ್ತ ಪ್ರದೇಶ - ೧೦೪.೦೦

೭. ಬೆಳ ಪದ್ಧತಿ - ರಾಗಿ, ಜೋಳ, ಭತ್ತ, ಮೆಕ್ಕೆಜೋಳ, ಹತ್ತಿ

೮. ಕೋಡಿಯ ಮಾದರಿ - ಸ್ಲೋಪಿಂಗ್ ಎಫ್ರಾನ್

**೪. ಚಿಕ್ಕಮಧುರೆ ಕೆರೆ**

ಚಿಕ್ಕಮಧುರೆ ಗ್ರಾಮವು ತಾಲ್ಲೂಕು ಕೇಂದ್ರದಿಂದ ೧೨ ಕಿ.ಮೀ. ದೂರದಲ್ಲಿದೆ. ಇದರ ಪಕ್ಕದಲ್ಲಿ ಹಿರೇಮಧುರೆ ಎಂಬ ಗ್ರಾಮವೂ ಸಹ ಇದೆ. ಈ ಗ್ರಾಮದಲ್ಲಿ ಬೃಹತ್ ಶಿಲಾಯುಗದ ಸಮಾಧಿ ಸಹ ಕಂಡುಬಂದಿದೆ. ಪ್ರಾಚೀನ ಕಾಲದ ಮಲ್ಲೇಶ್ವರ ದೇವಾಲಯ ಈ ಕೆರೆಯ ಮುಂಭಾಗದಲ್ಲಿ ಇರುವುದು. ಇಲ್ಲಿಯ ಕಂಬ ಶಾಸನದಿಂದ ಕ್ರಿ.ಶ. ೮೧೫ ಸಿಂಹ ಪೋತನ ಮಗ ಪರಮೇಶ್ವರ ಪಲ್ಲವಾದಿ ರಾಜ ಮತ್ತು ಅವನ ಮಗ ಪಲ್ಲವ ಮಲ್ಲ ಇದ್ದರೂ ರಾಷ್ಟ್ರಕೂಟರ ಸಾಮಂತರಾಗಿದ್ದರೆಂದು, ತಲಕಾಡಿನ ಗಂಗರು ಇವರಿಗೆ ಸೋತು ಸಾಮಂತರಾಗಿದ್ದರೆಂದು, ಪರಮೇಶ್ವರ ಪಲ್ಲವನ ನೊಳಂಬಾಳಿಗೆ ನೀರುಗುಂದ ನಾಡನ್ನು ಆಳುತ್ತಿದ್ದಾಗ ಅವನ ರಾಣಿ ಗಾವನ ಗಜ್ಜಿ ನಾಗ ಮಾರಜ್ಜಿಯರು ಶಿವಾಲಯಕ್ಕೆ ದತ್ತಿ ಬಿಟ್ಟಿದ್ದನ್ನು ಪರಮೇಶ್ವರನ ಸಹೋದರಿ ಪೆರ್ಮಾಡಿಯ ರಾಣಿಯಾಗಿದ್ದನ್ನು ಗಂಗ ನೊಳಂಬರು ವೈವಾಹಿಕ ಸಂಬಂಧವನ್ನು ನಾಗಗಬ್ಬೆಯು ಮದಕಲ್ಲಿನ ಗಾವಗನೇಶ್ವರ ದೇವಾಲಯವನ್ನು ಕಟ್ಟಿಸಿ ಭೂ ದತ್ತಿ ನೀಡಿದಳೆಂದು ತಿಳಿಸುವ ಶಾಸನವಿದೆ. ಈ ಶಾಸನ ಕನ್ನಡ ಲಿಪಿಯಲ್ಲಿದೆ. ಇದು ಪಲ್ಲವರ ರಾಜಧಾನಿಯಾಗಿತ್ತು.[೧೧]

ಹಿರೇಮಧುರೆ ಗ್ರಾಮದ ಕ್ರಿ.ಶ. ೧೫೦ಕ್ಕೆ ಸೇರಬಹುದಾದ ಶಿಥಿಲವಾದ ದಾಸಶಾಸನ ಕೆರೆಯ ಉಸ್ತುವಾರಿಯನ್ನು ನೋಡಿಕೊಳ್ಳಲು ಭೂಮಿಯನ್ನು ದಾನ ಮಾಡಿ ರಕ್ಷಿಸುವಂತೆ ಹೇಳಿದೆ.[೨] ಈ ದಾನಶಾಸನದಿಂದ ಈ ಕೆರೆಯನ್ನು ಕ್ರಿ.ಶ. ೧೧೫ರಲ್ಲಿ ನಿರ್ಮಾಣ ಮಾಡಿರುವುದು ಸ್ಪಷ್ಟವಾಗಿ ತಿಳಿಯುತ್ತದೆ.

ಚಿಕ್ಕಮಧುರೆ ಕೆರೆಯು ವಿಶಾಲವಾದ ಅಂಗಳವನ್ನು ಹೊಂದಿದ್ದು ಉದ್ದನೆಯ ಏರಿಯನ್ನು ಹೊಂದಿದೆ. ಈ ಕೆರೆಯು ಮಳೆಯ ನೀರನ್ನೇ ಆಶ್ರಯಿಸಿದ್ದೆ. ಈ ಕೆರೆಗೆ ಚಿತ್ರದುರ್ಗದ ನೀರು ಕಲ್ಲಹಳ್ಳಿ ಕೆರೆಗೆ ಬಂದು ಕೋಡಿ ಬಿದ್ದ ನಂತರ ಈ ನೀರು ಚಿಕ್ಕ ಮಧುರೆ ಕೆರೆಗ ಸೇರುತ್ತದೆ.

ಈ ಕೆರೆಗೆ ಹೆಚ್ಚು ನೀರು ಸಂಗ್ರಹವಾಗುತ್ತದೆ. ಈ ನೀರನ್ನು ಕುಡಿಯಲು ಹಾಗೂ ಕೃಷಿ ಚಟುವಟಿಕೆಗಳಿಗೆ ಬಳಕೆ ಮಾಡುತ್ತಿರುವುದು ಸಹಜವಾಗಿ ಕಂಡುಬರುತ್ತದೆ. ಕೆರೆಯು ಮಣ್ಣಿನ ಏರಿಯನ್ನು ಹೊಂದಿದ್ದು, ಒಳಭಾಗವು ದಪ್ಪ - ದಪ್ಪ ಕಲ್ಲುಗಳಿಂದ ನಿರ್ಮಿಸಲ್ಪಟ್ಟಿದ್ದು, ಹೊರಭಾಗವು ಮಣ್ಣಿನ ಏರಿಯನ್ನು ಒಳಗೊಂಡಿದೆ. ಈ ಕೆರೆಯಲ್ಲಿ ಎರಡು ತೂಬು ಮತ್ತು ಎರಡು ಕೋಡಿಗಳನ್ನು ನಿರ್ಮಾಣ ಮಾಡಿರುವುದು ಕಾಣಬಹುದು.

ತೂಬಿನಿಂದ ಹೊರಬಂದ ನೀರು ಕೃಷಿ ಭೂಮಿಗೆ ಸರಾಗವಾಗಿ ಹೋಗುವಂತೆ ಕಾಲುವೆಯನ್ನು ವ್ಯವಸ್ಥಿತವಾಗಿ ನಿರ್ಮಿಸಲಾಗಿದೆ. ಈ ಕೆರೆ ಕೋಡಿ ಬಿದ್ದ ನಂತರ ಇದರ ನೀರು ಗರಣಿ ಹಳ್ಳದ ಮುಖಾಂತರ ಸಾಣಿಕೆರೆ, ದೊಡ್ಡೇರಿ ಮತ್ತು ರಾಣಿಕೆರೆಗೆ ಸೇರುತ್ತದೆ.

ಈ ಕೆರೆಯ ದುರಂತವೆಂದರೆ ಪ್ರತಿ ವರ್ಷವೂ ಕೆರೆಗೆ ನೀರು ತುಂಬಿದಾಗ ಒಡೆದು ಹೋಗುವುದು ಇದರ ದುರಂತವಾಗಿದೆ. ಕೆರೆಗೆ ಸಂಬಂಧಿಸಿದ ತಾಂತ್ರಿಕ ಮಾಹಿತಿ

೧. ಹೋಬಳಿ - ಕಸಬಾ

೨. ಗ್ರಾಮ ಪಂಚಾಯ್ತಿ - ಸೋಮಗುದ್ದು

೩. ಗ್ರಾಮ - ಚಿಕ್ಕ ಮಧುರೆ

೪. ಕೆರೆಯ ಹೆಸರು - ಚಿಕ್ಕ ಮಧುರೆ ಕೆರೆ

೫. ಕೆರೆಯ ಕಾಲ - ಕ್ರಿ.ಶ. ೧೧೫

೬. ಜಲಾನಯನ ಪ್ರದೇಶ - ಅ. ಸ್ವತಂತ್ರ(ಚ.ಕಿ.ಮೀ.ಗಳಲ್ಲಿ) -೨೦,೦೦

೭. ಜಲಾವೃತ್ತ ಪ್ರದೇಶ - ೧೪೯.೨೯

೮. ಬೆಳೆ ಪದ್ಧತಿ - ರಾಗಿ, ಹತ್ತಿ, ಭತ್ತ, ಕಡಲೆ, ಈರುಳ್ಳಿ

೯. ಕೆರೆಯ ಮಾದರಿ - ಸ್ಲೋಪಿಂಗ್ ಎಫ್ರಾನ್

**ನಗರಂಗೆರೆ(ಕೆರೆ)**

ನಗರಂಗೆರೆಯು ತಾಲ್ಲೂಕು ಕೇಂದ್ರದಂದ ೪. ಕಿ.ಮೀ. ದೂರದಲ್ಲಿ, ಈ ಗ್ರಾಮವು ಚಳ್ಳಕೆರೆ ಪಟ್ಟಣಕ್ಕೆ ಹೊಂದಿಕೊಂಡಿದ್ದು, ಚಾರಿತ್ರಿಕ ಕಾಲದ ಎಣ್ಣೆ ಮತ್ತು ಕಟ್ಟಿಗೆಯ ಕಾರ್ಖಾನೆಗಳನ್ನು ಕಾಣಬಹುದಾಗಿದೆ. ಈ ಗ್ರಾಮದ ಹೊರ ವಲಯದಲ್ಲಿ ನಗರಂಗೆರೆ, ಉಪ್ಪಾರಹಟ್ಟಿ ಮತ್ತು ದೊಡ್ಡೇರಿಗಳ ಮಧ್ಯದಲ್ಲಿ ಕಂಡುಬರುವ ಗರೀಬ್ ಷಾ ವಲಿದುರ್ಗಾವು ಪ್ರಮುಖವಾದದು. ಪ್ರತಿ ವರ್ಷವು ಉರುಸ್ ಮಹೋತ್ಸವವನ್ನು ನಡೆಸಲಾಗುತ್ತದೆ. ಹಿಂದೂ-ಮುಸ್ಲಿಮರ ಭಾವೈಕ್ಯತೆಯನ್ನು ಕಾಣಬಹುದು. ಪ್ರಾಚೀನ ಕಾಲದ ಮಲ್ಲೇಶ್ವರ ದೇವಾಲಯ ಪ್ರಮುಖವಾಗಿದೆ.

ಈ ಕೆರೆಯು ಅತ್ಯಂತ ವಿಶಾಲವಾದ ಅಂಗಳವನ್ನು ಹೊಂದಿದ್ದು, ಕರೆಕಲ್ ಕೆರೆ, ಹಳ್ಳ, ಕೊಳ್ಳ ಮತ್ತು ಸೋಮಗುದ್ದು ಹಳ್ಳದಿಂದ ನೀರು ಬರುತ್ತದೆ. ಕೆರೆಯ ಏರಿಯು ಅತ್ಯಂತ ವಿಶಾಲವಾಗಿದ್ದು, ಏರಿಯ ಒಳಭಾಗವು ದಪ್ಪ-ದಪ್ಪ ಕಲ್ಲುಗಳಿಂದ ನಿರ್ಮಿಸಲ್ಪಟ್ಟಿದ್ದು, ಹೊರ ಭಾಗವು ಮಣ್ಣಿನ ಏರಿಯನ್ನು ಸಹ ಒಳಗೊಂಡಿದೆ. ಎರಡು ತೂಬುಗಳನ್ನು ಹೊಂದಿದೆ. ಕೆರೆಯ ಕೋಡಿ ಪಕ್ಕದಲ್ಲಿ ಕೋಡಿ ಮಲ್ಲೇಶ್ವರ ದೇವಾಲಯವಿದೆ. ಕೋಡಿಯ ಪಕ್ಕದಲ್ಲಿ ಕಪ್ಪು ಶಿಲೆ(ಕರೆಕಲ್)ಗಳನ್ನು ಕಾಣಬಹುದು. ಈ ಕೆರೆಯ ನೀರು ಕೃಷಿಗೆ ಉಪಯೋಗಿಸುತ್ತಾರೆ.

ಈ ಕೆರೆಯ ಅಂಗಳದಲ್ಲಿ ಇತ್ತೀಚೆಗೆ ನಗರೀಕರಣ ಪ್ರಭಾವದಿಂದಾಗಿ ಮನೆಗಳನ್ನು ನಿರ್ಮಿಸಿರುವುದು ಒಂದು ವಿಷಾದನೀಯವಾಗಿದೆ. ಕೆರೆಯಲ್ಲಿರುವ ಊಳನ್ನು ಟ್ರಾಕ್ಟರ್‌ಗಳ ಮೂಲಕ ತೆಗೆದಂತಾಗುತ್ತದೆ.[೧೩]

**ಕೆರೆಗೆ ಸಂಬಂಧಿಸಿದ ತಾಂತ್ರಿಕ ಮಾಹಿತಿ**

೧. ಕೆರೆಯಲ್ಲಿ ನೀರು ಸಂಗ್ರಹವಾಗುವುದು - ಮಳೆ ಅಶ್ರಿತ

೨. ಕೆರೆಯ ನೀರಿನ ಗರಿಷ್ಠಮಟ್ಟ........

೩. ಜಲಾನಯನ ಪ್ರದೇಶ -

ಅ. ಸ್ವತಂತ್ರ(ಚ.ಕಿ.ಮೀ.ಗಳಲ್ಲಿ) - ೨೪.೧೮

ಆ. ಸಂಯುಕ್ತ(ಚ.ಕಿ.ಮೀ.ಗಳಲ್ಲಿ) ೯೧.೭೨

೪. ಜಲಾವೃತ್ತ ಪ್ರದೇಶ ಹೆಕ್ಟೇರ್ - ೧೧೬.೪೨

೫. ಕೆರೆಯ ಶೇಖರಣಾ ಸಾಮರ್ಥ್ಯ(M.C.M) - ೨.೩೬೨

೬. ಜಲ ನೀರು ಅರಿವಿನ ಪ್ರಮಾಣ - ೨೫.೩೮

೭. ಕೆರೆಯ ಉಪಯುಕ್ತ(M.C.M.) - ೨.೩೩೫

**ಗೊರ್ಲಕಟ್ಟೆ ದುಗ್ಗಮ್ಮನ ಕೆರೆ**

ಈ ಗ್ರಾಮವು ಚಳ್ಳಕೆರೆ ತಾಲ್ಲೂಕು ಕೇಂದ್ರದಿಂದ ಎರಡು ಮೈಲಿ ದೂರದಲ್ಲಿದೆ. ಗೊರ್ಲಕಟ್ಟೆ ಗ್ರಾಮವು ನನ್ನಿವಾಳ ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಸೇರಿದ್ದಾಗಿದೆ. ಇಲ್ಲಿ ಕುರುಬ ಜನಾಂಗದವರು ಹೆಚ್ಚಾಗಿ ವಾಸಿಸುತ್ತಿದ್ದು, ಈ ಕೆರೆಯ ಪಕ್ಕದಲ್ಲಿ ಜಗಲೂರಜ್ಜ ಮಹಾಸ್ವಾಮಿ ದೇವಾಲಯ, ಆಂಜನೇಯ ಸ್ವಾಮಿ ದೇವಾಲಯಯ ಹಾಗೂ ದುಗ್ಗಮ್ಮನ ದೇವಸ್ಥಾನವು ಒಳಗೊಂಡಿದ್ದು, ೫ ವರ್ಷಕ್ಕೊಮ್ಮೆ ಗ್ರಾಮದೇವತೆಯಾದ ದುಗ್ಗಮ್ಮನ ಜಾತ್ರೆಯನ್ನು ಸಹ ಮಾಡುವುದರಿಂದ ಹಾಗೂ ಗ್ರಾಮದೇವತೆಯಾದ್ದರಿಂದ ದುಗ್ಗಮ್ಮನ ಕೆರೆಯೊಂದು ಸಹ ಕರೆಯುತ್ತಾರೆ. ಈ ಕೆರೆಯನ್ನು ಕ್ರಿ.ಶ.ಸು. ೧೯೦೦ರಲ್ಲಿ ನಿರ್ಮಿಸಲಾಗಿದೆ.

ಈ ಕೆರೆಯು ಜಗಲೂರಜ್ಜನ ದೇವಾಲಯದ ಹಿಂಬದಿಯಲ್ಲಿದೆ. ಕೆರೆಯ ಕೋಡಿಯ ಪಕ್ಕದಲ್ಲಿ ದುಗ್ಗಮ್ಮನ ದೇವಾಲಯ ಇರುವುದರಿಂದ ದುಗ್ಗಮ್ಮನ ಕೆರೆ ಎಂದು ಕರೆಯಲಾಗಿದೆ. ಈ ಕೆರೆಯು ಕಪ್ಪು ಮತ್ತು ಕೆಂಪು ಮಿಶ್ರಿತ ಫಲವತ್ತತೆಯ ವಿಶಾಲವಾದ ಕೆರೆಯ ಅಂಗಳನ್ನು ಹೊಂದಿದ್ದು, ಸಣ್ಣ ಪುಟ್ಟ ಹಳ್ಳ, ಕೊಳ್ಳ, ಕಟ್ಟೆ, ಬಾವಿಗಳ ನೀರು ಈ ಕೆರೆಗೆ ಜಲದಾನವಾಗಿದೆ. ಎರಡು ತೂಬುಗಳನ್ನು ಹೊಂದಿದ್ದು, ದೊಡ್ಡ ತೂಬು ತಾಂತ್ರಿಕವಾಗಿ ನಿರ್ಮಿತವಾಗಿದ್ದು, ಅಜ್ಜನ ಗುಡಿಯ ಹಿಂಬದಿಯಲ್ಲಿ ಇದೆ. ಕೆರೆಯು ಮಣ್ಣಿನ ಏರಿಯನ್ನು ಹೊಂದಿದ್ದು, ಒಳಭಾಗವು ದಪ್ಪ-ದಪ್ಪ ಕಲ್ಲುಗಳಿಂದ ನಿರ್ಮಿಸಲ್ಪಟ್ಟಿದ್ದು, ಹೊರಭಾಗವು ಮಣ್ಣಿನ ಏರಿಯನ್ನು ಒಳಗೊಂಡಿದೆ. ಎರಡು ಕೋಡಿಗಳನ್ನು ಒಳಗೊಂಡಿರುವುದು ಕಂಡುಬರುತ್ತದೆ. ತೂಬಿನಿಂದ ಹೊರಬಂದ ನೀರು ಕಾಲುವೆಗಳ ಮುಖಾಂತರ ಕೃಷಿ ಹಾಗೂ ಜನರ ಉಪಯೋಗಕ್ಕೆ ಬಳಸಲಾಗಿದೆ.[೧೪]

ಕೆರೆಗೆ ಸಂಬಂಧಿಸಿದ ತಾಂತ್ರಿಕ ಮಾಹಿತಿಯನ್ನು ಈ ಕೆಳಕಂಡಂತೆ ಅಂಕಿ-ಅಂಶಗಳಿಂದ ತಿಳಿಯಬಹುದಾಗಿದೆ.

೧. ಕೆರೆಯ ಜಲಾನಯನ ಪ್ರದೇಶನ - ೪.೫೦

೨. ಜಲಾವೃತ್ತ ಪ್ರದೇಶ - ೬೦.೦೮[೧೫]

೩. ಬೆಳೆ ಪದ್ಧತಿ - ಭತ್ತ, ರಾಗಿ, ಜೋಳ, ಹತ್ತಿ, ಇತರೆ ಬೆಳೆಗಳು

೪. ಕೋಡಿಯ ಮಾದರಿ - ಸ್ಲೋಪಿಂಗ್ ಎಫ್ರಾನ್

**ಅಡಿ ಟಿಪ್ಪಣಿಗಳು**

೧. ಜಿ.ಎಂ.ಕೆ., ೨೦೦೭, ನೀರು, ಸಪ್ನಬುಕ್‌ಹೌಸ್, ಬೆಂಗಳೂರು. ಪು. ೨೪.

೨. ಶ್ರೀ ವಾಜಪೇಯಂ ಶ್ರೀರಂಗಚಾರ್ಯ(ಅನು), ೧೯೪೮, ಶ್ರೀಮಾತ್ಸ್ಯಪುರಾಣಂ, ಸಂಪುಟ-೬, ಪು. ೧೮೪.

೩. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಪು. ೧.

೪. ಲಕ್ಷ್ಮಣ್ ತೆಲಗಾವಿ, ಎಸ್. ದೊಡ್ಡೇರಿ ಕದನ, ಪು. ೧೪.

೫. ಪೂರ್ವೋಕ್ತ, ಪು. ೧೬.

೬. ಕ್ಷೇತ್ರಕಾರ್ಯ ವರದಿ.

೭. ಕ್ಷೇತ್ರಕಾರ್ಯ ವರದಿ.

೮. ಮೀರಾಸಾಬಿಹಳ್ಳಿ ಶಿವಣ್ಣ, ಮ್ಯಾಸಮಂಡಲ, ಪು. ೯.

೯. ಸಾಣಿಕೆರೆ ರಘು, ಐತಿಹಾಸಿಕ ಕ್ಷೇತ್ರ ಸಾಣಿಕೆರೆ, ಪು. ೨೫.

೧೦. ಕ್ಷೇತ್ರಕಾರ್ಯ ವರದಿ.

೧೧. Epigraphia Carnatica-XI: CHALLAKERE-33.

೧೨. ಚಂದ್ರವಳ್ಳಿ, ಪುರ್ವೋಕ್ತ, ಪು. ೨೯.

೧೩. ಕ್ಷೇತ್ರಕಾರ್ಯ ವರದಿ.

೧೪. ಕ್ಷೇತ್ರಕಾರ್ಯ ವರದಿ.

೧೫. ಸಣ್ಣ ನೀರಾವರಿ ಇಲಾಖೆ, ಚಿತ್ರದುರ್ಗ - ನೀಡಿದ ಮಾಹಿತಿ.



# ಅಧ್ಯಾಯ: ಆರು

# ಸಮಾರೋಪ

ಪ್ರಾಚೀನ ಕಾಲದಿಂದಲೂ ಕರ್ನಾಟಕವು ಪುರಾತನ ಸಂಸ್ಕೃತಿ ಮತ್ತು ಐತಿಹಾಸಿಕ ಮಹತ್ವವನ್ನು ಪಡೆದಿದೆ. ಇತಿಹಾಸ ಕಾಲದಿಂದ ಮಾತ್ರವಲ್ಲದೆ, ಇತಿಹಾಸ ಪೂರ್ವಕಾಲದಿಂದಲೂ ಮಾನವ ಸಂಸ್ಕೃತಿಯ ಆಕರಗಳನ್ನು ನೀಡುತ್ತಾ ಬಂದಿದೆ. ಈ ಪ್ರದೇಶವು ಅನೇಕ ವೈಶಿಷ್ಟ್ಯತೆಗಳಿಂದ ಕೂಡಿದೆ. ಅಂತಹ ವೈಶಿಷ್ಟ್ಯತೆಯು ಪ್ರಾಗಿತಿಹಾಸಿಕವಾಗಿಯೂ, ಐತಿಹಾಸಿಕವಾಗಿಯೂ, ಸಾಂಸ್ಕೃತಿಕವಾಗಿಯೂ ಹಾಗೂ ರಾಜಕೀಯವಾಗಿಯೂ ಮಹತ್ವವನ್ನು ಹೊಂದಿರುತ್ತವೆ. ಚರಿತ್ರೆಯ ಕಾಲದಿಂದ ಹಲವಾರು ಸಾಮ್ರಾಜ್ಯಗಳು, ಸಾಮಂತ ಆಳ್ವಿಕೆಯನ್ನು ಮಾಡಿವೆ. ಇದಕ್ಕೆ ಅನುಗುಣವಾಗಿ ಇತಿಹಾಸ ಮತ್ತು ಪುರಾತತ್ವ ಅವಶೇಷಗಳನ್ನು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಮಾಹಿತಿಯನ್ನು ನೀಡುವಲ್ಲಿ ಸಫಲವಾಗಿದೆ. ಹಿಂದಿನಿಂದಲೂ ಕರ್ನಾಟಕವು ಸರ್ವಧರ್ಮ ಸಮನ್ವಯ ಸಾಧಿಸಿದ ಭೂಮಿಯಾಗಿದೆ.

ಚಳ್ಳಕೆರೆ ಕಸಬಾ ಹೋಬಳಿಯ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಕುರಿತು ಈವರೆಗೆ ವಿವರವಾಗಿ ಸಂಶೋಧನೆ ನಡೆದಿಲ್ಲ. ಪ್ರಸ್ತುತ ಅಧ್ಯಯನದ ಮೂಲಕ ಅಂತಹ ಒಂದು ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ. ಇಲ್ಲಿನ ಸ್ಥಳೀಯ ಚರಿತ್ರೆಯನ್ನು ವಿಶ್ಲೇಷಣಾತ್ಮಕ ಹಾಗೂ ವಿವರಣಾತ್ಮಕವಾಗಿ ಕಟ್ಟಿಕೊಡುವ ಹಿನ್ನೆಲೆಯಲ್ಲಿ ವ್ಯಾಪಕವಾದ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತು. ಕ್ಷೇತ್ರಕಾರ್ಯದ ನೆಲೆಗಳಾದ ಸೂಕ್ಷ್ಮ ಶಿಲಾಯುಗ, ನವ ಶಿಲಾಯುಗ ಮತ್ತು ಬೃಹತ್ ಶಿಲಾಯುಗದ ನೆಲೆಗಳು, ಇತಿಹಾಸಪೂರ್ವ ಕಾಲದ ನೆಲೆಗಳು, ಇದರ ಅವಶೇಷಗಳು ಚಾರಿತ್ರಿಕ ಇತಿಹಾಸದ ಕೊಡುಗೆ, ಚಾರಿತ್ರಿಕ ಕಾಲಘಟ್ಟದ ದೇವಾಲಯಗಳು, ಶೈವಶಿಲ್ಪಿಗಳು, ವೈಷ್ಣವ ಶಿಲ್ಪಿಗಳು, ಶಾಕ್ತ ದೇವತೆಗಳು, ಶಾಕ್ತ ಶಿಲ್ಪಗಳು, ಗ್ರಾಮದೇವತೆಗಳು, ಸ್ಥಳನಾಮ, ಸ್ಥಳಪುರಾಣಗಳು, ಐತಿಹ್ಯಗಳು, ಚಾರಿತ್ರಿಕ ಕೆರೆಗಳನ್ನು ಕುರಿತು ಅಧ್ಯಯನ ನಡೆಸಲಾಯಿತು. ಒಟ್ಟಿನಲ್ಲಿ ಈ ಪ್ರದೇಶದ ಚರಿತ್ರೆಯನ್ನು ಸಮಗ್ರವಾಗಿ ರಚಿಸುವ ಸಲುವಾಗಿ ಸೂಕ್ಷ್ಮ ಸಂಗತಿಗಳನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ಪ್ರಸ್ತುತ ಅಧ್ಯಯನದ ವಿಷಯವನ್ನು ಆಯ್ದುಕೊಂಡು ಕಸಬಾ ಹೋಬಳಿಯ ಗ್ರಾಮಗಳಲ್ಲಿ ಕ್ಷೇತ್ರಕಾರ್ಯ ಕೈಗೊಳ್ಳಲಾಯಿತು. ಈ ಪ್ರದೇಶದಲ್ಲಿ ಪ್ರಾಗಿತಿಹಾಸ ಕಾಲದಿಂದ ಇತಿಹಾಸ ಕಾಲದವರೆಗಿನ ನೆಲೆಗಳಿದ್ದು ಅವುಗಳಲ್ಲಿ ಕೆಲವನ್ನು ಈಗಾಗಲೇ ಪತ್ತೆ ಹಚ್ಚುವ ಕಾರ್ಯ ಅಲ್ಪ ಪ್ರಮಾಣದಲ್ಲಿ ನಡೆದಿದೆ. ಬೆಟ್ಟ, ಗುಡ್ಡ, ಅರಣ್ಯ, ಬಯಲು ಪ್ರದೇಶವಾದ ಹೋಬಳಿಯಲ್ಲಿ ಪ್ರಾಗಿತಿಹಾಸದಿಂದ ಮಾನವನು ಉಪಯೋಗಿಸುತ್ತಿದ್ದ ಉಪಕರಣಗಳು, ಆಯುಧಗಳನ್ನು ತಯಾರಿಸಲು ಕೋರೆಗಳು, ಕ್ವಾರ್ಟ್ಸ್‌ಶಿಲೆಯನ್ನು ಬಳಸಿರುವುದು ಸಹಜವಾಗಿ ಕಂಡುಬರುತ್ತದೆ. ನವಶಿಲಾಯುಗದ ನೆಲೆಗಳಾದ ಹಳೇ ದೊಡ್ಡೇರಿ ಗ್ರಾಮದಲ್ಲಿ ಕಪ್ಪು ಬಣ್ಣದ ಮಡಿಕೆ, ಕೆಂಪು ಬಣ್ಣದ ತಟ್ಟೆಯಾಕಾರದ, ನಯವಾದ ಮಡಿಕೆ ತುಣುಕುಗಳು ದೊರೆತಿದ್ದು ತದನಂತರ ಕಲ್ಲಿನ ಕೊಡಲಿಗಳು, ಸುಟ್ಟ ಮಣ್ಣಿನ ಬಿಲ್ಲೆಗಳು, ಅರೆಯುವ ಕಲ್ಲುಗಳು, ಕುಟ್ಟುವ ಕಲ್ಲುಗಳು, ಹಾಳಾದ ಬೂದಿ ದಿಬ್ಬಗಳು, ಚಿಕ್ಕ ಒನಕೆ ಎರೆಯುವ ಆಯುಧ(ಸ್ಕ್ರೀಪರ್ಸ್) ಈ ತರಹದ ಆಯುಧಗಳು ಗಂಜಿಗುಂಟೆಯಲ್ಲಿ ಹಾಗೂ ಇನಾಂಗಾನ್ ಉತ್ಖನನದಲ್ಲಿ ದೊರಕಿದ್ದು ಹೋಲಿಕೆಯಿವೆ. ಕಲ್ಲಿನ ಬಿಲ್ಲೆ ಸಹ ಗಂಜಿಗುಂಟೆ ನೆಲೆಯಲ್ಲಿ ದೊರೆತಿದ್ದು ಸಹಜವಾಗಿ ಕಂಡುಬರುತ್ತದೆ.

ಬೃಹತ್ ಶಿಲಾಯುಗ ಸಂಸ್ಕೃತಿಯ ಕೆಲವು ನೆಲೆಗಳಲ್ಲಿ ಕೆಲವು ಅವಶೇಷಗಳು ಕಂಡುಬಂದಿವೆ. ಇದರಲ್ಲಿ ವಿಶೇಷವಾಗಿ ಬೃಹತ್ ಶಿಲಾಯುಗದ ಸಮಾಧಿಗಳು ದೊಡ್ಡೇರಿ, ಹಿರೇಮಧುರೆಯಲ್ಲಿ ಸಹ ಕಂಡುಬರುತ್ತದೆ. ಇತಿಹಾಸಪೂರ್ವದ ಕೆಲವು ಅವಶೇಷಗಳು ದೊಡ್ಡೇರಿಯಲ್ಲಿ ಸಿಕ್ಕಿದ್ದು ದೊಡ್ಡೇರಿಯನ್ನು ಇತಿಹಾಸ ಪೂರ್ವಕಾಲಕ್ಕೆ ಕೊಂಡೊಯ್ಯುತ್ತದೆ.

ಕಸಬಾ ಹೋಬಳಿಯು ಚಾರಿತ್ರಿಕ ಅಧ್ಯಯನದಿಂದ ಮುಖ್ಯವಾದ ನಿರ್ಣಯಗಳನ್ನು ಮತ್ತು ಕೊಡುಗೆಗಳನ್ನು ನಿರೂಪಿಸಲಾಗಿದೆ. ಚಳ್ಳಕೆರೆ, ಕಸಬಾ ಹೋಬಳಿಯಲ್ಲಿ ರಾಷ್ಟ್ರಕೂಟರ ಕಾಲದಿಂದ ಹಿಡಿದು ಮೈಸೂರು ಅರಸರ ಕಾಲದವರೆಗೂ ವಿವಿಧ ಮನೆತನಗಳ ಆಳ್ವಿಕೆಗೆ ಒಳಪಟ್ಟಿರುವುದು ಶಾಸನಶಿಲ್ಪಗಳಿಂದ ದೃಢಪಡುತ್ತದೆ. ವಿವಿಧ ರಾಜಮನೆತನದ ಚಕ್ರವರ್ತಿಗಳು ಮತ್ತು ರಾಜರು ತಮ್ಮ ಸಾಮರ್ಥ್ಯದ ಆಧಾರದ ಮೇಲೆ ಈ ಪ್ರದೇಶದ ಕೆಲವು ಭಾಗಗಳನ್ನು ವಶಪಡಿಸಿಕೊಂಡು ಆಳ್ವಿಕೆ ನಡೆಸಿರುವುದನ್ನು ಗಮನಿಸಬಹುದು. ಕೆಲವೊಮ್ಮೆ ಅಂದಿನ ದಂಡನಾಯಕರು ಇಲ್ಲಿ ಆಳ್ವಿಕೆ ನಡೆಸಿ ಈ ಪ್ರದೇಶಕ್ಕೆ ತಮ್ಮದೇ ಕೊಡುಗೆಯನ್ನು ನೀಡಿದ್ದಾರೆ. ಅವರಲ್ಲಿ ಹೊಯ್ಸಳರು, ರಾಷ್ಟ್ರಕೂಟರು, ನೊಳಂಬರು, ಕಲ್ಯಾಣ ಚಾಲುಕ್ಯರು, ವಿಜಯನಗರದ ಅರಸರು, ಹರತಿಪಾಳೆಗಾರರು ಮತ್ತು ಚಿತ್ರದುರ್ಗ ಪಾಳೆಗಾರರು ಹಾಗೂ ಮರಾಠ ಕಾಲದವರೆಗೂ ನೋಡುತ್ತೇವೆ.

ಪ್ರಮುಖವಾಗಿ ಈ ಪ್ರದೇಶದಲ್ಲಿ ಹೊಯ್ಸಳರು, ರಾಷ್ಟ್ರಕೂಟರು, ನೊಳಂಬರು, ಕಲ್ಯಾಣ ಚಾಲುಕ್ಯರು, ವಿಜಯನಗರದ ಅರಸರು, ಹರತಿ ಪಾಳೆಗಾರರು ಮತ್ತು ಚಿತ್ರದುರ್ಗ ಪಾಳೆಗಾರರು ಹಾಗೂ ಮರಾಠರ ಕಾಲದವರೆಗೂ ಆಳ್ವಿಕೆಗೆ ಒಳಪಟ್ಟಿತ್ತು. ಇವರ ಕಾಲದಲ್ಲಿ ಈ ಪ್ರದೇಶದ

ವ್ಯಾಪ್ತಿಯು ವಿಸ್ತಾರಗೊಂಡು ರಾಜಕೀಯ ಮಾನ್ಯತೆಯನ್ನು ಪಡೆದಿತ್ತು. ಇವರುಗಳ ಸಂಕ್ಷಿಪ್ತ ರಾಜಕೀಯ ಇತಿಹಾಸವನ್ನು ಅವಲೋಕನ ಮಾಡಲಾಗಿದೆ.

ಕಸಬಾ ಹೋಬಳಿಯ ಕೆಲವು ಗ್ರಾಮಗಳ ಸ್ಥಳನಾಮ, ಸ್ಥಳಪುರಾಣ ಮತ್ತು ಐತಿಹ್ಯಗಳು ಐತಿಹಾಸಿಕವಾಗಿ ಮಹತ್ವವನ್ನು ಪಡೆದಿವೆ. ಒಂದು ಪ್ರದೇಶದ ಇತಿಹಾಸವನ್ನು ಅಧ್ಯಯನ ಮಾಡುವಾಗ ಅಲ್ಲಿನ ಸ್ಥಳನಾಮ ಕುರಿತು ವಿಶ್ಲೇಷಿಸುವುದು ಅವಶ್ಯಕ. ಸ್ಥಳನಾಮಗಳು ಪುರಾಣ, ಇತಿಹಾಸ, ಧರ್ಮ, ಸಂಸ್ಕೃತಿ, ಆಚಾರ, ನಂಬಿಕೆ, ಭಾಷಾಪ್ರಭಾವ, ಭೂಸ್ಥಿತಿ ಮೊದಲಾದ ವಿಚಾರಗಳನ್ನು ತಿಳಿಸುತ್ತದೆ. ಭೌಗೋಳಿಕವಾಗಿ ಬೆಟ್ಟ, ಗುಡ್ಡ, ಅರಣ್ಯ ಮತ್ತು ಬಯಲು ಪ್ರದೇಶದಿಂದ ಈ ಪ್ರದೇಶ ಕೂಡಿರುವುದರಿಂದ ಇಂದು ಸ್ಥಳನಾಮಗಳ ಮೇಲೆ ಪ್ರಭಾವ ಬೀರಿದೆ.

ಸ್ಥಳನಾಮಗಳಲ್ಲಿ ಈ ಪರಿಸರದ ಪ್ರಕೃತಿವಾಚಿ ಸ್ಥಳನಾಮಗಳನ್ನು ಹಾಗೂ ಸಾಂಸ್ಕೃತಿಕ ಸ್ಥಳನಾಮಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಸ್ಥಳಪುರಾಣದಲ್ಲಿ ಈ ಹಿಂದೆ ನಡೆದ ಘಟನೆಗಳು, ದೇವರ ಅವತಾರ ಕಥೆಗಳು, ರಾಮಾಯಣದಲ್ಲಿ ದೊಡ್ಡೇರಿ ಮಾರ್ಗವಾಗಿ ತನ್ನ ವಾನರ ಸೇನೆಯೊಂದಿಗೆ ಲಂಕೆಗೆ ಸಾಗಿಸಿರುವ ವಿವರಗಳಿವೆ. ಪುರಾಣದೊಂದಿಗೆ ಈ ಎಲ್ಲ ಅಂಶಗಳನ್ನು ವಿಶ್ಲೇಷಿಸಿದಾಗ ಈ ಪ್ರದೇಶದಲ್ಲಿ ಋಷಿಮುನಿಗಳು ಮತ್ತು ಸಿದ್ಧಪುರುಷರು ನೆಲೆಸಿದ ಸ್ಥಳವೆಂದು ತಿಳಿಯುತ್ತದೆ. ಪಾಂಡವರು ತಮ್ಮ ವನವಾಸವನ್ನು ಈ ಪ್ರದೇಶದಲ್ಲಿ ಮಾಡಿರಬಹುದೆಂದು ಹೇಳುತ್ತಾರೆ. ಈ ಪರಿಸರದ ಕೆಲವು ಗ್ರಾಮಗಳ ಐತಿಹ್ಯಗಳನ್ನು ಸ್ಥಳಪುರಾಣಗಳಲ್ಲಿ ಪೌರಾಣಿಕ ವಿಷಯಗಳ ಜೊತೆ ಕಲೆ, ವಿಜ್ಞಾನ, ಸಂಗೀತ ಹಲವು ವಿಷಯಗಳಿರುವುದರಿಂದ ಒಂದು ಸ್ಥಳದ ಇತಿಹಾಸ ರಚನೆಗೆ ಇವು ಒತ್ತಾಸೆಯಾಗುತ್ತವೆ.

ದೇವಾಲಯಗಳಿಗೆ ಸಂಬಂಧಿಸಿದಂತೆ ಅವುಗಳ ಉಗಮ ಮತ್ತು ವಿಕಾಸವನ್ನು ಸಂಕ್ಷಿಪ್ತವಾಗಿ ಹೇಳಿ ಪ್ರಸ್ತುತ ವ್ಯಾಪ್ತಿಯ ಒಳಗೆ ರಾಷ್ಟ್ರಕೂಟರು, ನೊಳಂಬರು, ಕಲ್ಯಾಣ ಚಾಲುಕ್ಯರು, ವಿಜಯನಗರದ ಅರಸರು ಪಾಳೆಗಾರರು, ಹರತಿ ಪಾಳೆಗಾರರು, ಮರಾಠ ಕಾಲದ ದೇವಾಲಯಗಳು ಹಾಗೂ ಸ್ಥಳೀಯ ದೇವಾಲಯಗಳು ಪ್ರಮುಖವೆನಿಸಿವೆ. ಅಲಂಕಾರಿಕವಾಗಿ ವಾಸ್ತುಶೈಲಿಯ ದೃಷ್ಟಿಯಿಂದ ಒರಟಾಗಿ ಕಂಡರೂ ವೈಶಾಲ್ಯತೆಯ ದೃಷ್ಟಿಯಿಂದ ಪ್ರಾಮುಖ್ಯತೆ ಪಡೆದಿವೆ. ರಾಷ್ಟ್ರಕೂಟರ ಶೈಲಿಯಲ್ಲಿ ನಿರ್ಮಾಣಗೊಂಡಿರುವ ದೇವಾಲಯಗಳೆಂದರೆ ಮಲ್ಲೇಶ್ವರ ದೇವಾಲಯ, ದೊಡ್ಡೇರಿಯ ಗೋಕರ್ಣೇಶ್ವರ ದೇವಾಲಯ ಕಂಡುಬರುತ್ತವೆ. ಇನ್ನು ನೊಳಂಬ ಪಲ್ಲವ ವಾಸ್ತುಶೈಲಿಯ ದೇವಾಲಯಗಳು ಗಂಜಿಗುಂಟೆಯ ಈಶ್ವರ ದೇವಾಲಯ, ಹೆಗ್ಗೆರೆಯ ಈಶ್ವರ ದೇವಾಲಯ ಸಹ ಕಾಣಬಹುದು. ವಿಜಯನಗರೋತ್ತರ ಕಾಲದ ವೀರಭದ್ರ, ಈಶ್ವರ, ಕೋಡಿಮಲ್ಲೇಶ್ವರ ದೇವಾಲಯಗಳು ಸಹ ಈ ಪ್ರದೇಶದ ವ್ಯಾಪ್ತಿಯಲ್ಲಿ ಕಂಡುಬರುತ್ತವೆ. ಈ ದೇವಾಲಯಗಳಲ್ಲಿ ಗ್ರಾನೈಟ್ ಶಿಲೆಯನ್ನು ಬಳಸಿ ಇವರ ವಾಸ್ತು ಕೃತಿಗಳು ನಿರ್ಮಾಣ

ಗೊಂಡಿರುವುದರಿಂದ ಹೆಚ್ಚಿನ ಅಲಂಕಾರಿಕ ಅಂಶಗಳು ಕಂಡುಬರುವುದಿಲ್ಲ. ಕೆಲವು ದೇವಾಲಯಗಳ ಕಂಬಗಳಲ್ಲಿ ಉಬ್ಬುಶಿಲ್ಪಗಳ ಕೆತ್ತನೆಯು ಪ್ರಮುಖವಾಗಿ ಕಾಣುತ್ತದೆ.

ಈ ದೇವಾಲಯಗಳಿಗೆ ಹೊಂದಿಕೊಂಡಂತೆ ಶೈವಶಿಲ್ಪ, ವೈಷ್ಣವಶಿಲ್ಪ, ಶಾಕ್ತಶಿಲ್ಪ, ಗ್ರಾಮದೇವತೆಗಳ ಶಿಲ್ಪಗಳು ಸಹ ಕಂಡುಬರುತ್ತವೆ. ಶಾಕ್ತ ದೇವಾಲಯಗಳು, ಗ್ರಾಮ ದೇವತೆಗಳು, ಚಳ್ಳಕೇರಮ್ಮ, ದುರ್ಗಮ್ಮ, ಕಟ್ಟೆಮಾರಕ್ಕ, ಮಾರಕ್ಕ, ಶಾಕ್ತ ದೇವತೆಗಳು ಮತ್ತು ಗ್ರಾಮದೇವತೆಗಳ ಆಚರಣೆಗಳಲ್ಲಿ ಬಲಿ, ಹರಕೆ, ಗಂಗೆಪೂಜೆ, ಸಿಡಿ ಆಡುವುದು, ತಾಳಿ ಭಾಗ್ಯ, ಗಾವು ಜಿಗಿಯುವುದು, ಗ್ರಾಮ ದೇವತೆಯ ಆಚರಣೆಗಳಲ್ಲಿ ಈ ಮೇಲ್ಕಂಡ ಪ್ರತಿಯೊಂದು ಅಂಶವು ಸಹ ಕಂಡುಬರುತ್ತದೆ. ಶಿಲ್ಪಗಳಲ್ಲಿ ಚಿಕ್ಕಮಧುರೆಯ ಕಾಳಿ ಶಿಲ್ಪ, ಸಪ್ತ ಮಾತೃಕೆಯ ಶಿಲ್ಪ, ಪಾರ್ವತಿ, ಮಹಿಷಮರ್ದಿನಿ, ಗಜಲಕ್ಷ್ಮಿ, ದುರ್ಗಾಂಬಿಕಾ, ಮಾರಕ್ಕನ ಶಿಲ್ಪವು ಸಹ ಕಾಣಬಹುದಾಗಿದೆ. ಈ ಮೇಲಿನ ಶಿಲ್ಪಗಳು ಪ್ರಾಚೀನವಾದವು. ಇವುಗಳಿಂದ ಈ ಪ್ರದೇಶದ ಜನರು ತಮ್ಮದೇ ಆದ ದೈವತ್ವವನ್ನು ಸ್ವೀಕರಿಸಿ ಪೂಜಿಸುತ್ತಿದ್ದರೆಂಬುದಂತೂ ಸ್ಪಷ್ಟ.

ಆರ್ಥಿಕ ವ್ಯವಸ್ಥೆಯಲ್ಲಿ ಕೃಷಿ ಪ್ರಮುಖವಾದ ಪಾತ್ರ ವಹಿಸಿದೆ. ಈ ಪರಿಸರದಲ್ಲಿ ಕಂಡುಬರುವಂತಹ ಇಲ್ಲಿನ ಕೆರೆಗಳು ಇಲ್ಲಿನ ಕೃಷಿವ್ಯವಸ್ಥೆಯ ಬೆನ್ನೆಲುಬು. ಪ್ರಾಚೀನ ಕಾಲದ ಮಲ್ಲೇಶ್ವರ ದೇವಾಲಯ ಈ ಕೆರೆಯ ಮುಂಭಾಗದಲ್ಲಿ ಇರುವುದನ್ನು ಕಾಣಬಹುದು. ಇಲ್ಲಿನ ಕಂಬ ಶಾಸನದಿಂದ ಕ್ರಿ.ಶ. ೮೧೫ರಲ್ಲಿ ಸಿಂಹಪೋತನ ಮಗ ಪರಮೇಶ್ವರ ಪಲ್ಲವಾದಿ ರಾಜ ಮತ್ತು ಅವನ ಮಗ ಪಲ್ಲವ ಮಲ್ಲ ಇವರು ರಾಷ್ಟ್ರಕೂಟರ ಸಾಮಂತರಾಗಿದ್ದ ಸಂದರ್ಭದಲ್ಲಿ ಚಿಕ್ಕಮಧುರೆ ಕೆರೆ ನಿರ್ಮಾಣವಾಗಿರುವುದು ಶಾಸನದಲ್ಲಿ ಉಲ್ಲೇಖವಿದೆ. ಹಿರೇಮಧುರೆ ಗ್ರಾಮದ ಕ್ರಿ.ಶ. ೮೫೦ಕ್ಕೆ ಸೇರಬಹುದಾದ ಶಿಥಿಲವಾದ ದಾನಶಾಸನದಲ್ಲಿ ಈ ಕೆರೆಯ ಉಸ್ತುವಾರಿಯನ್ನು ನೋಡಿಕೊಳ್ಳಲು ಭೂಮಿಯನ್ನು ದಾನ ಮಾಡಿ ರಕ್ಷಿಸುವಂತೆ ಸಹ ಹೇಳಿರುವುದು ಸತ್ಯಕ್ಕೆ ಹತ್ತಿರವಾಗಿದೆ. ದೊಡ್ಡೇರಿ ಕೆರೆಯು ಕ್ರಿ.ಶ. ೧೬೮೦–೧೬೯೬ರವರೆಗೆ ನಡೆದ ದೊಡ್ಡೇರಿ ಕದನವು ಈ ಕೆರೆಯ ಏರಿ ಮೇಲೆ ಸಹ ನಡೆದಿರುವ ಸಾಧ್ಯತೆಯುಂಟು. ಕ್ರಿ.ಶ. ೧೯೦೭ರಲ್ಲಿ ಮೈಸೂರಿನ ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ್ ಅವರ ಪತ್ನಿಯ ಸ್ಮರಣಾರ್ಥವಾಗಿ ಈ ಕೆರೆಯನ್ನು ನಿರ್ಮಿಸಿರುವುದು ಕಾಣಬಹುದಾಗಿದೆ.

ವ್ಯವಸಾಯ ಈ ಪ್ರದೇಶದ ಜನರ ಪ್ರಮುಖ ಉದ್ಯೋಗವಾದ್ದರಿಂದ ಇಲ್ಲಿ ಆಳ್ವಿಕೆ ಮಾಡಿದ ಕೆಲವು ರಾಜವಂಶಗಳು ಕೆರೆಗಳ ನಿರ್ಮಾಣದಲ್ಲಿ ಆಸ್ಥೆ ವಹಿಸಿದ್ದಾರೆ. ರಾಜರು, ದಂಡನಾಯಕರು, ಮಹಾಜನಗಳು, ಜನಸಾಮಾನ್ಯರು ಕೆರೆಗಳನ್ನು ನಿರ್ಮಿಸಿ ಪ್ರತಿಫಲವನ್ನು ಪಡೆದುಕೊಂಡಿದ್ದಾರೆ. ಇಂದಿಗೂ ಕಸಬಾ ಹೋಬಳಿಯ ಕೃಷಿವ್ಯವಸ್ಥೆಯ ಆಧಾರವಾಗಿ ಕೆರೆಗಳು ಉಪಯೋಗದಲ್ಲಿವೆ. ಶ್ರೇಷ್ಠ ತಂತ್ರಜ್ಞಾನವನ್ನು ಕೆರೆಯ ನಿರ್ಮಾಣದಲ್ಲಿ ಬಳಸಿದ್ದು ಕೆರೆಯ ಪ್ರಮುಖ ಭಾಗಗಳಾದ ಏರಿ. ತೂಬು, ಕೋಡಿ, ಕಾಲುವೆಗಳ ರಚನೆ ಇಂದಿಗೂ ಕೆಲವು ಕಡೆ

ಹಾನಿಯಾಗದೆ ಉಳಿದಿವೆ. ಕೆರೆಗಳನ್ನು ನಿರ್ಮಿಸುವವರಿಗೆ, ರಕ್ಷಿಸುವವರಿಗೆ ಬಿತ್ತುವಾಟ, ದಶವಂದ, ಕಟ್ಟು ಕೊಡುಗೆಗಳನ್ನು ನೀಡಿ ಪ್ರೋತ್ಸಾಹಿಸಲಾಗುತ್ತಿತ್ತು.

"ಚಳ್ಳಕೆರೆ ಕಸಬಾ ಹೋಬಳಿಯ ಇತಿಹಾಸ ಮತ್ತು ಪುರಾತತ್ವ ಅಧ್ಯಯನ"ವನ್ನು ಪುನರ್ರಚಿಸುವಲ್ಲಿ ಪ್ರಾಗಿತಿಹಾಸ ಕಾಲದ ಅವಶೇಷ, ಸ್ಮಾರಕ, ಸಾಹಿತ್ಯ, ಜಾನಪದ ಮತ್ತು ಮೌಖಿಕ ಆಕರಗಳು, ಪುರಾಣಗಳು, ಐತಿಹ್ಯಗಳು, ಇತರೆ ಆಕರಗಳು ಪ್ರಾದೇಶಿಕವಾಗಿ ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದ ವಿವಿಧ ಮುಖಗಳ ಅಧ್ಯಯನಕ್ಕೆ ಅಪಾರವಾದ ಕೊಡುಗೆಗಳನ್ನು ಸಲ್ಲಿಸಿರುವುದು ದೃಢವಾಗುತ್ತದೆ. ಇಷ್ಟೆಲ್ಲ ಮಹತ್ವದ ವಿಷಯಗಳನ್ನು ಹೊರಗೆಡಹುವುದು. ಈ ಅವಶೇಷಗಳು ಇಂದು ವಿನಾಶದ ಅಂಚಿನಲ್ಲಿವೆ. ಕೆಲವು ಪ್ರಕೃತಿಯ ನೈಸರ್ಗಿಕ ವಿಕೋಪಗಳಿಗೆ ತುತ್ತಾಗಿ ಕಾಲಗರ್ಭದಲ್ಲಿ ಲೀನವಾಗುತ್ತಿವೆ. ಇನ್ನು ಕೆಲವು ವಿವಿಧ ಸ್ಥಳೀಯ ಮೂಢನಂಬಿಕೆಗಳಿಗೆ ಆಹುತಿಯಾಗುತ್ತಿವೆ. ಈ ನಿಟ್ಟಿನಲ್ಲಿ ಸಂಬಂಧಿಸಿದ ಇಲಾಖೆಗಳು, ಸಂಘ ಸಂಸ್ಥೆಗಳು, ಸಂಶೋಧಕರು, ಹಾಗೂ ಸ್ಥಳೀಯರು ಇವುಗಳ ಸಂರಕ್ಷಣೆಯೆಡೆಗೆ ಗಮನ ಹರಿಸುವುದು ಇಂದಿನ ತುರ್ತಾಗಿದೆ.



## ಗ್ರಂಥಋಣ

* ಅಪರ್ಣಾ ಕೂ.ಸ, ೧೯೯೯, ದೇವಾಲಯದ ವಾಸ್ತುಶಿಲ್ಪ ಪರಿಚಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.
* ಅನಂತ ರಂಗಾಚಾರ್ ಎನ್, ೧೯೮೪, ಭಾರತೀಯ ದೇವಾಲಯಗಳು ಮತ್ತು ಸಂಸ್ಕೃತ, ಸ್ವಚ್ಛಂದ ಪ್ರಕಾಶನ, ಮೈಸೂರು.
* ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ: ಸಂಪುಟ–೧, ೨೦೦೫, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
* ಕಲಬುರ್ಗಿ ಎಂ.ಎಂ., ೧೯೯೪, ಕರ್ನಾಟಕ ಕೈಫಿಯತ್ತುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.
* ಕಲಬುರ್ಗಿ ಎಂ.ಎಂ, ೨೦೧೦, ಕನ್ನಡ ನಾಮ ವಿಜ್ಞಾನ, ಸಪ್ನ ಬುಕ್ ಹೌಸ್, ಬೆಂಗಳೂರು.
* ಕಾಮತ್ ಎಸ್.ಯು, ೧೯೮೬, ಕರ್ನಾಟಕ ರಾಜ್ಯ ಗೆಜೆಟಿಯರ್, ಭಾಗ–೩, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು.
* ಕೃಷ್ಣಮೂರ್ತಿ ಹನೂರು, ೧೯೯೩, ಮ್ಯಾಸಬೇಡ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
* ಕೃಷ್ಣಮೂರ್ತಿ ಹನೂರು, ೨೦೦೫, ಸಾವಿರದ ಸಿರಿ ಬೆಳಗು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.
* ಕೃಷ್ಣಮೂರ್ತಿ ಪಿ.ವಿ., ೧೯೯೯, ಚಿತ್ರದುರ್ಗ ಜಿಲ್ಲೆಯಲ್ಲಿ ವಿಜನಯಗರ ವಿಜಯನಗರದ ಆಡಳಿತ ವಿಭಾಗಗಳು, ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು, ಕಲಬುರ್ಗಿ ಎಂ.ಎಂ. (ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.
* ಗಿರಿಜಾ ಟಿ., ೧೯೯೧, ಚಿತ್ರದುರ್ಗ ಜಿಲ್ಲಾದರ್ಶಿನಿ, ರೇಖಾ ಪ್ರಕಾಶನ, ಮೈಸೂರು ಮಠದ ರಸ್ತೆ, ದಾವಣಗೆರೆ.
* ಗಿರಿಜಾ ಟಿ., ೨೦೦೭, ಭಾರತ ನದಿಗಳು, ನಿಹಾರಿಕಾ ಪ್ರಕಾಶನ, ದಾವಣಗೆರೆ.

* ಗೋಪಾಲ್ ಆರ್ (ಸಂ), ೨೦೦೫, ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ.
* ಗಂಗಾನಾಯಕ್ ಪ್ರಧಾನ ಸಂಪಾದಕರು, ಇಂದಿರಾ ಆರ್. ಸಂಪಾದಕರು, ಸಮಾಜಶಾಸ್ತ್ರ ಕರ್ನಾಟಕ ಸರ್ಕಾರ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು
* ದೀಕ್ಷಿತ ಜಿ.ಎಸ್., ೨೦೦೦, ಕುಪ್ಪಸ್ವಾಮಿ ಜಿ.ಆರ್., ಮೋಹನ್ ಎಸ್.ಕೆ., ಕರ್ನಾಟಕದಲ್ಲಿ ಕೆರೆ ನೀರಾವರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.
* ಪ್ರಾಚ್ಯವಸ್ತು ಸಂಗ್ರಹಾಲಯಯಗಳ ನಿರ್ದೇಶನಾಲಯ, ಹೊಸಪೇಟೆ.
* ಚ.ನ. ಶಂಕರರಾವ್, ಸಮಾಜಶಾಸ್ತ್ರ (ಭಾರತೀಯ ಸಮಾಜದ ಸಂರಚನೆ ಮತ್ತು ಪರಿವರ್ತನೆ) ಜೈ ಭಾರತ್ ಪ್ರಕಾಶನ, ಮಂಗಳೂರು.
* ಚಿದಾನಂದ ಮೂರ್ತಿ ಎಂ., ೨೦೦೨, ಜನ–ಜನಪದ–ಜಾನಪದ, ಸ್ವಪ್ನ ಬುಕ್ ಹೌಸ್, ಬೆಂಗಳೂರು.
* ತಿಪ್ಪಣ್ಣ ಮರಿಕುಂಟೆ ಬಿ., ೨೦೦೫, ಒಂದು ಊರಿನ ಕತೆ, ಬಾಲ್ಯದ ಕೆರೆ ಪ್ರಕಾಶನ, ನಾಗಮಂಗಲ ತಾ. ಮಂಡ್ಯ ಜಿಲ್ಲೆ.
* ದೇವರಕೊಂಡಾರೆಡ್ಡಿ, ೧೯೯೮, ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
* ನಾರಾಯಣ ಕೆ.ವಿ. (ಸಂ), ೨೦೦೧, ಹಂಪಿ ಪರಿಸರದ ಕೆರೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.
* ಪ್ರಭಾಕರ್ ಎ.ಎಸ್., ೨೦೦೯, ಮ್ಯಾಸಬೇಡರ ಕಥನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
* ಪ್ರಭಾಕರ್ ಎಂ.ಎನ್., ೨೦೧೧, ದೇವಾಲಯ ವಾಸ್ತು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
* ಬಸವರಾಜಪ್ಪ ಜೆ.ಎಸ್., ೨೦೦೩, ದೊಡ್ಡೇರಿ ಇತಿಹಾಸ ದರ್ಶನ, ಶ್ರೀ ಬಸವಪ್ರಿಯ ಪ್ರಕಾಶನ, ಭದ್ರಾವತಿ.
* ಮಹದೇವ ಸಿ., ೨೦೦೧, ಕರ್ನಾಟಕದಲ್ಲಿ ಪುರಾತತ್ವ ಶೋಧ, ಶ್ರೀಲಕ್ಷ್ಮಿ ಪ್ರಕಾಶನ, ಶ್ರೀರಂಗಪಟ್ಟಣ.
* ಮೀರಸಾಬಿಹಳ್ಳಿ ಶಿವಣ್ಣ, ೧೯೯೫, ಮ್ಯಾಸಮಂಡಲ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

* ಮೂರ್ತಿ ಎಂ.ಎಸ್., ೨೦೧೧, ದೇವಾಲಯ ವಾಸ್ತು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

* ರಹಮತ್ ತರೀಕೆರೆ, ೨೦೧೭, ಕರ್ನಾಟಕ ಶಾಕ್ತ ಪಂಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

* ರಮೇಶ ನಾಯಕ (ಸಂ), ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳು, ಮರು ಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ,

* ರಾಮದಾಸರೆಡ್ಡಿ ಎಸ್.ಜಿ., ೨೦೦೯, ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

* ಲಕ್ಕಪ್ಪಗೌಡ ಎಚ್.ಜೆ. (ಸಂ), ೧೯೯೧, ಜಾನಪದ ಮತ್ತು ಪೂರಕ ಕ್ಷೇತ್ರಗಳು, ಬಿ.ಆರ್. ಪ್ರಾಜೆಕ್ಟ್, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ

* ಲಕ್ಷ್ಮಣ್ ತೆಲಗಾವಿ (ಸಂ), ೨೦೦೧, ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

* ಲಕ್ಷ್ಮಣ್ ತೆಲಗಾವಿ (ಸಂ), ೨೦೦೪, ಮೌರ್ಯ ಮತ್ತು ಶಾತವಾಹನ ಯುಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

* ಲಕ್ಷ್ಮಣ್ ತೆಲಗಾವಿ, ೧೯೭೬, ಶ್ರೀನಿವಾಸ ಎಂ.ವಿ. (ಸಂ), ಚಂದ್ರವಳ್ಳಿ, ಜಿಲ್ಲಾ ಇತಿಹಾಸ ಸಂಶೋಧನಾ ಮಂಡಳಿ, ಚಿತ್ರದುರ್ಗ.

* ಲಕ್ಷ್ಮಣ್ ತೆಲಗಾವಿ, ಎಸ್. ದೊಡ್ಡೇರಿ ಕದನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

* ಲಿಂಗಯ್ಯ ಡಿ. ಮತ್ತು ಸಂಧ್ಯಾರೆಡ್ಡಿ ಕೆ.ಆರ್., ೧೯೯೭, ಜಾನಪದ ಸ್ವರೂಪ ಮತ್ತು ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

* ವಸು ಎಂ.ವಿ., ೨೦೦೧, ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

* ವಿಶ್ವನಾಥ, ೨೦೦೦, ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ, ದೇವಿ ಪ್ರಕಾಶನ, ಮೈಸೂರು.

* ವೀರಣ್ಣ ದಂಡೆ, ೧೯೯೩, ಕನ್ನಡ ಜಾನಪದ ಪ್ರಜ್ಞೆ, ಕವಿರಾಜ ಮಾರ್ಗ ಪ್ರಕಾಶನ, ಕಲಬುರ್ಗಿ.

* ಶಿವತಾರಕ ಕೆ.ಬಿ., ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

* ಶ್ರೀನಿವಾಸ ಪಾಡಿಗಾರ, ೧೯೯೭, ಪುರಾತತ್ವಶಾಸ್ತ್ರ ಪರಿಚಯ, ರಾಮಾಶ್ರಯ ಪಬ್ಲಿಕೇಷನ್ಸ್, ಧಾರವಾಡ.
* ಶ್ಯಾಮಲ ಸಿ.ಆರ್., ೨೦೦೮, ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
* ಸಾಣಿಕೆರೆ ರಘು, ೨೦೦೨, ಐತಿಹಾಸಿಕ ಕ್ಷೇತ್ರ ಸಾಣಿಕೆರೆ ಎ.ಕೆ. ಕುದುರಪ್ಪ, ಗಾಂಧಿನಕರ, ಚಳ್ಳಕೆರೆ.
* ಸಿಂದಗಿ ರಾಜಶೇಖರ್, ೧೯೮೮, ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಸುಜಾತ ಪಬ್ಲಿಕೇಷನ್ಸ್, ಧಾರವಾಡ.
* ಸುರೇಶ ಬಿ, ೨೦೦೯, ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳ ದೇವಾಲಯಗಳು, ಸಂಶೋಧನಾ ಪ್ರಕಾಶನ, ಬಾಲೇನಹಳ್ಳಿ ಚಳ್ಳಕೆರೆ ತಾ.
* ಸೋಮಶೇಖರ್ ಎಸ್.ವೈ., ೨೦೦೯, ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧ ನೀತಿ, ಸಂಚಿಕೆ ಪ್ರಕಾಶನ, ಚಿತ್ರದುರ್ಗ.
* ಸೋಮಶೇಖರ್ ಎಸ್.ವೈ., ಜಟಿಂಗ ರಾಮೇಶ್ವರ ದರ್ಶನ, ಸುಮೇಧ ಪ್ರಕಾಶನ, ದೇವಸಮುದ್ರ, ಚಿತ್ರದುರ್ಗ ಜಿಲ್ಲೆ
* ಸುಂದರ ಅ (ಸಂ), ೧೯೯೭, ಕರ್ನಾಟಕ ಚರಿತ್ರೆ ಜಿಲ್ಲೆ, ಸಂಪುಟ-೧ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಆಂಗ್ಲ ಭಾಷೆಯ ಪುಸ್ತಕಗಳು**

* Mysore Archeological reports, 1928-1946, Mysore State, Mysore
* Rice B.L., Mysore Gazetteer, vol-II, Govt of Mysore, Mysore, 1897
* Rice B.L., Epigraphia Carnatica-XI, 1903
* Mysore Archeological Annual Report, 1929 and 1977
* Chitradurga District Gazetteer, 1967

**ಪಿಎಚ್.ಡಿ. ಸಂಶೋಧನ ಪ್ರಬಂಧಗಳು**

* ಕರಿಬಸಪ್ಪ ಎ., ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೩.
* ಕುಮಾರಿ ಶಾರದಾ ಮಲ್ಲಿಕಾರ್ಜುನ ಪಾಟೀಲ್, ಕೊಪ್ಪಳ ಜಿಲ್ಲೆಯ ಕೆರೆ-ಬಾವಿಗಳು ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೧೭

* ಚಾರುಲತಾ, ಬ್ರಹ್ಮಗಿರಿ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೧೫

* ತಿಪ್ಪೇಸ್ವಾಮಿ ಹೆಚ್., ದಾವಣಗೆರೆ ಜಿಲ್ಲೆಯ ದೇವಾಲಯಗಳು, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

* ಮಂಜುನಾಥ ಜಿ.ವಿ., ದಾವಣಗೆರೆ ಜಿಲ್ಲೆಯ ದೇವಾಲಯಗಳ ಒಂದು ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೧೦

* ಮಂಜುನಾಥ ಎಂ., ಯಳಂದೂರು ತಾಲೂಕು ಇತಿಹಾಸ ಮತ್ತು ಪುರಾತತ್ವ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೧೬

* ಶಿವತಾರಕ್ ಕೆ.ಬಿ., ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು ಒಂದು ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೯

* ಶಂಕ್ರಪ್ಪ ಮೌನೇಶ್ವರ ಬಡಿಗೇರ, ಗದಗ ಜಿಲ್ಲೆ ಕೆರೆ–ಬಾವಿಗಳು, ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೧೪

**ಎಂ.ಫಿಲ್. ಸಂಶೋಧನ ಪ್ರಬಂಧಗಳು**

* ಜಗದೀಶ ಡಿ. ಹಿರಿಯೂರು ಪಟ್ಟಣದ ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೧೬

* ನಾಗರಾಜಪ್ಪ ಎಸ್, ಚಿತ್ರದುರ್ಗ ಪರಿಸರದ ದೇವಾಲಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೮

* ಲತಾ ಬಿ.ಕೆ., ಹೊಳಲ್ಕೆರೆ ಪಟ್ಟಣದ ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೧೪

* ಲೋಕೇಶ ಜಿ.ಎಂ., ಚಿನ್ನಹಗರಿ ನದಿ ಪರಿಸರದ ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

* ವಿಶ್ವನಾಥ ಪಿ., ಚಿತ್ರದುರ್ಗ ಪ್ರದೇಶದ ಪ್ರಾಗೈತಿಹಾಸಿಕ ಚಿತ್ರಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೯

* ವೇದಮೂರ್ತಿ ಪಿ. ಪಾಲಯ್ಯ, ಚಳ್ಳಕೆರೆ ತಾಲೂಕು ಪರಿಸರದ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೯

# ಕೋಷ್ಟಕ-೧ ದೇವಾಲಯಗಳು

| ಕ್ರ.ಸಂ. | ದೇವಾಲಯಗಳ ಹೆಸರು | ಸ್ಥಳ | ತಳವಿನ್ಯಾಸ | ವಾಸ್ತುಶೈಲಿ | ಕಾಲ | ಪಂಥ |
|---|---|---|---|---|---|---|
| ೧. | ಮಲ್ಲೇಶ್ವರ ದೇವಾಲಯ | ಚಿಕ್ಕಮಧುರೆ ಗ್ರಾಮ ಪಶ್ಚಿಮಕ್ಕೆ | ಗರ್ಭಗೃಹ, ಸಭಾಮಂಟಪ | ರಾಷ್ಟ್ರಕೂಟ | ರಾಷ್ಟ್ರಕೂಟ | ಶೈವ |
| ೨. | ಈಶ್ವರ ದೇವಾಲಯ | ದೊಡ್ಡೇರಿ ಗ್ರಾಮದ ಮಧ್ಯೆ | ಗರ್ಭಗೃಹ ಸಭಾಮಂಟಪ | ವಿಜಯನಗರೋತ್ತರ | ಪಾಳೆಗಾರ | ಶೈವ |
| ೩. | ವೀರಭದ್ರ ದೇವಾಲಯ | ದೊಡ್ಡೇರಿ ಗ್ರಾಮದ ಪೂರ್ವಕ್ಕೆ | ಗರ್ಭಗೃಹ ಸಭಾಮಂಟಪ | ವಿಜಯನಗರೋತ್ತರ | ಪಾಳೆಗಾರ | ಶೈವ |
| ೪. | ಗೋಕರ್ಣೇಶ್ವರ ದೇವಾಲಯ | ದೊಡ್ಡೇರಿ ಗ್ರಾಮದ ದಕ್ಷಿಣಕ್ಕೆ | ಗರ್ಭಗೃಹ ಸಭಾಮಂಟಪ | ರಾಷ್ಟ್ರಕೂಟ | ರಾಷ್ಟ್ರಕೂಟ ೧೦,೧೧ನೇ ಶತಮಾನ | ಶೈವ |
| ೫. | ಕೋಟೆ ಮಲ್ಲೇಶ್ವರ ದೇವಾಲಯ | ನಗರಂಗೆರೆ ಗ್ರಾಮದ ಈಶಾನ್ಯಕ್ಕೆ | ಗರ್ಭಗೃಹ, ಅಂತರಾಳ ಸಭಾಮಂಟಪ | ವಿಜಯನಗರೋತ್ತರ | ಪಾಳೆಗಾರ ೧೭-೧೮ನೇ ಶತಮಾನ | ಶೈವ |
| ೬. | ಬಯಲು ಆಂಜನೇಯ | ಭರಮಸಾಗರದ ರಾಣಿಕೆರೆಯ ಎಡಭಾಗದಲ್ಲಿ | ಗರ್ಭಗೃಹ ಸಭಾಮಂಟಪ ದೀಪಸ್ತಂಭ | ಸ್ಥಳೀಯ | ೧೮-೧೯ನೇ ಶತಮಾನ | ವೈಷ್ಣವ |

| | | | | | | |
|---|---|---|---|---|---|---|
| ೭ | ಈಶ್ವರ ದೇವಾಲಯ | ಗಂಜಿಗುಂಟೆ ಮಧುರೆ ಹಳ್ಳದ ಎಡದಂಡೆ | ಗರ್ಭಗೃಹ<br>ಸಭಾಮಂಟಪ | ನೊಳಂಬ, ಪಲ್ಲವ | ೧೯ನೇ ಶತಮಾನ | ಶೈವ |
| ೮. | ರೇವಣಸಿದ್ದೇಶ್ವ ದೇವಾಲಯ | ದೊಡ್ಡೇರಿ ಗ್ರಾಮದ ಮಧ್ಯೆ | ಗರ್ಭಗೃಹ<br>ಅಂತರಾಳ<br>ಸಭಾಮಂಟಪ<br>ತೆರೆದ ಮಂಟಪ | ಸ್ಥಳೀಯ | ೧೭-೧೮ನೇ ಶತಮಾನ | ಶೈವ |
| ೯. | ಬಸವದೇವಾಲಯ | ದೊಡ್ಡೇರಿ | ಗರ್ಭಗೃಹ<br>ಮುಖಮಂಟಪ | ಸ್ಥಳೀಯ | ೧೮ನೇ ಶತಮಾನ | ಶೈವ |
| ೧೦. | ಈಶ್ವರ ದೇವಾಲಯ | ಹೆಗ್ಗೆರೆ | ಗರ್ಭಗೃಹ<br>ನವರಂಗ<br>ಸಭಾಮಂಟಪ | ಸ್ಥಳೀಯ | ೧೯ನೇ ಶತಮಾನ | ಶೈವ |
| ೧೧. | ತ್ರಿಕೂಟ ದೇವಾಲಯ | ಬೊಂಬೇರಹಳ್ಳಿ | ಗರ್ಭಗೃಹ<br>ನವರಂಗ<br>ಸಭಾಮಂಟಪ | ಸ್ಥಳೀಯ | ೨೦ನೇ ಶತಮಾನ | ವೈಷ್ಣವ |
| ೧೨. | ಹನುಮಂತ ದೇವಾಲಯ | ಬೊಂಬೇರಹಳ್ಳಿ | ಗರ್ಭಗೃಹ<br>ಸಭಾಮಂಟಪ | ಸ್ಥಳೀಯ | ೧೯ನೇ ಶತಮಾನ | ವೈಷ್ಣವ |

| | | | | | | |
|---|---|---|---|---|---|---|
| ೧೩. | ಮಲ್ಲೇಶ್ವರ ದೇವಾಲಯ | ಚಿಕ್ಕಮಧುರೆ | ಗರ್ಭಗೃಹ<br>ಸಭಾಮಂಟಪ | ರಾಷ್ಟ್ರಕೂಟ | ೧೯ನೇ ಶತಮಾನ | ಶೈವ |
| ೧೪. | ಸೋಮೇಶ್ವರ ದೇವಾಲಯ | ಸೋಮಗುದ್ದು | ಗರ್ಭಗೃಹ<br>ಅಂತರಾಳ<br>ಸಭಾಮಂಟಪ | ಸ್ಥಳೀಯ | ೧೮–೧೯ನೇ ಶತಮಾನ | ಶೈವ |
| ೧೫. | ವೀರಭದ್ರ ದೇವಾಲಯ | ಚಳ್ಳಕೆರೆ | ಗರ್ಭಗೃಹ<br>ಅಂತರಾಳ<br>ಸಭಾಮಂಟಪ | ಸ್ಥಳೀಯ | ಕ್ರಿ.ಶ. ೧೯೦೬ | ಶೈವ |

## ಕೋಷ್ಟಕ–೨

### ಶೈವ ಶಿಲ್ಪಗಳು

| ಕ್ರ.ಸಂ. | ಶಿಲ್ಪ | ದೇವಾಲಯ | ಸ್ಥಳ | ಗ್ರಾಮ | ಕಾಲ | ಪಂಥ |
|---|---|---|---|---|---|---|
| ೧. | ವೀರಭದ್ರಮೂರ್ತಿ | ಶ್ರೀ ವೀರಭದ್ರೇಶ್ವರ ದೇವಾಲಯ | ಶ್ರೀ ವೀರಭದ್ರ ದೇವಾಲಯ ಗರ್ಭಗೃಹ | ದೊಡ್ಡೇರಿ | | ಶೈವ |
| ೨. | ಗಣೇಶ | ಮಲ್ಲೇಶ್ವರ ದೇವಾಲಯ | ಮಲ್ಲೇಶ್ವರ ದೇವಾಲಯಮುಂದೆ | ಚಿಕ್ಕಮಧುರೆ | ೧೯ನೇ ಶತಮಾನ | ಶೈವ |
| ೩. | ಗಣೇಶ | ಬಸವ ದೇವಾಲಯ | ಬಸವ ದೇವಾಲಯ ಪಕ್ಕ | ದೊಡ್ಡೇರಿ | ೧೪–೧೫ನೇ ಶತಮಾನ | ಶೈವ |
| ೪. | ಕಾರ್ತಿಕೇಯ | – | ಚಿಕ್ಕಮಧುರೆ ಮಧ್ಯೆ | ಚಿಕ್ಕಮಧುರೆ | ೧೦–೧೧ನೇ ಶತಮಾನ | ಶೈವ |

### ವೈಷ್ಣವ ಶಿಲ್ಪಗಳು

| ಕ್ರ.ಸಂ. | ಶಿಲ್ಪ | ದೇವಾಲಯ | ಸ್ಥಳ | ಗ್ರಾಮ | ಕಾಲ | ಪಂಥ |
|---|---|---|---|---|---|---|
| ೧. | ವಿಷ್ಣು | ಮಲ್ಲೇಶ್ವರ ದೇವಾಲಯ | ಮಲ್ಲೇಶ್ವರ ದೇವಾಲಯ ಮುಂಭಾಗ | ಚಿಕ್ಕಮಧುರೆ | ೧೨ನೇ ಶತಮಾನ | ವಿಷ್ಣು |
| ೨. | ವೈಷ್ಣವ ದ್ವಾರಪಾಲಕರು | ಮಲ್ಲಿಕಾರ್ಜುನ ದೇವಾಲಯ | ಮಲ್ಲಿಕಾರ್ಜುನ ದೇವಾಲಯ ಮುಂದೆ | ದೊಡ್ಡೇರಿ | ೧೪–೧೫ನೇ ಶತಮಾನ | ವಿಷ್ಣು |
| ೩. | ವಿಷ್ಣು | ಆಂಜನೇಯ ದೇವಾಲಯ | ಆಂಜನೇಯ ದೇವಾಲಯ ಮುಂಭಾಗ | ಚಿಕ್ಕಮಧುರೆ | ೧೨–೧೩ನೇ ಶತಮಾನ | ವಿಷ್ಣು |

## ಶಾಕ್ತ ಶಿಲ್ಪಗಳು

| ಕ್ರ.ಸಂ. | ಶಿಲ್ಪ | ದೇವಾಲಯ | ಸ್ಥಳ | ಗ್ರಾಮ | ಕಾಲ | ಪಂಥ |
|---|---|---|---|---|---|---|
| ೧. | ಕಾಳಿ | ಮಲ್ಲೇಶ್ವರ ದೇವಾಲಯ | ಮಲ್ಲೇಶ್ವರ ದೇವಾಲಯ ಮುಂಭಾಗ | ಚಿಕ್ಕಮಧುರೆ | ೧೩-೧೪ನೇ ಶತಮಾನ | ಶಾಕ್ತ |
| ೨. | ಸಪ್ತಮಾತೃಕೆ | ಮಲ್ಲೇಶ್ವರ ದೇವಾಲಯ | ಮಲ್ಲೇಶ್ವರ ದೇವಾಲಯ ಮುಂಭಾಗ | ಚಿಕ್ಕಮಧುರೆ | ೧೩-೧೪ನೇ ಶತಮಾನ | ಶಾಕ್ತ |
| ೩. | ಮಹಿಷಮರ್ಧಿನಿ | ಮಲ್ಲೇಶ್ವರ ದೇವಾಲಯ | ಮಲ್ಲೇಶ್ವರ ದೇವಾಲಯ ಮುಂಭಾಗ | ಚಿಕ್ಕಮಧುರೆ | ೧೨-೧೩ನೇ ಶತಮಾನ | ಶಾಕ್ತ |
| ೪. | ಪಾರ್ವತಿ | ಶ್ರೀ ವೀರಭದ್ರ ದೇವಾಲಯ | ವೀರಭದ್ರ ದೇವಾಲಯ ಮುಖಮಂಟಪ | ದೊಡ್ಡೇರಿ | | ಶಾಕ್ತ |
| ೫. | ಮಹಿಷಮರ್ಧಿನಿ | – | ದೊಡ್ಡೇರಿ ಮಧ್ಯೆ | ದೊಡ್ಡೇರಿ | ೧೪-೧೫ನೇ ಶತಮಾನ | ಶಾಕ್ತ |
| ೬. | ಗಜಲಕ್ಷ್ಮಿ | ಮಲ್ಲೇಶ್ವರ ದೇವಾಲಯ | ಮಲ್ಲೇಶ್ವರ ದೇವಾಲಯ ಮುಂಭಾಗ | ಚಿಕ್ಕಮಧುರೆ | ೧೩-೧೪ನೇ ಶತಮಾನ | ಶಾಕ್ತ |
| ೭ | ಸಪ್ತಮಾತೃಕೆ | – | ದೊಡ್ಡೇರಿ ಕೆರೆಯ ಏರಿ ಮೇಲೆ | ದೊಡ್ಡೇರಿ | ೧೯ನೇ ಶತಮಾನ | ಶಾಕ್ತ |

| | | | | | | |
|---|---|---|---|---|---|---|
| ೮. | ಮಾರಕ್ಕ | ಮಾರಕ್ಕನ ದೇವಾಲಯ | ಮೀರಾಸಾಬಿಹಳ್ಳಿ ಆಸ್ಪತ್ರೆ ಮುಂಭಾಗ | ಮೀರಾಸಾಬಿಹಳ್ಳಿ | ಕ್ರಿ.ಶ. ೧೯೫೦ | ಶಾಕ್ತ |
| ೯. | ದುರ್ಗಾಂಬಿಕಾ | ದುರ್ಗಾಂಬಿಕಾ ದೇವಾಲಯ | ಎಸ್.ಸಿ. ಕಾಲೋನಿ | ದೊಡ್ಡೇರಿ | ಕ್ರಿ.ಶ. ೧೯೦೦ | ಶಾಕ್ತ |
| ೧೦. | ಚಳ್ಳಕೇರಮ್ಮ | ಚಳ್ಳಕೇರಮ್ಮ ದೇವಸ್ಥಾನ | ಚಳ್ಳಕೆರೆಯ ಮಧ್ಯೆ | ಚಳ್ಳಕೆರೆ | ೧೭-೧೮ನೇ ಶತಮಾನ | ಶಾಕ್ತ |

## ಕೋಷ್ಟಕ-೩

## ಕೆರೆಗಳು

| ಕ್ರ.ಸಂ. | ಕೆರೆಯ ಹೆಸರು | ಕೆರೆಯಿರುವ ಗ್ರಾಮ | ಜಲಾವೃತ ಪ್ರದೇಶ | ತೂಬುಗಳ ಸಂಖ್ಯೆ | ಕೆರೆಯ ಸ್ಥಿತಿ | ಕೆರೆ ನೀರಿನ ಮೂಲ | ಕಾಲ |
|---|---|---|---|---|---|---|---|
| ೧. | ದೊಡ್ಡೇರಿ ಕೆರೆ | ಹಳೇ ದೊಡ್ಡೇರಿ | ೨೬೯.೦೦ | ೨ | ಕನಿಷ್ಠ | ಮಳೆ | ಕ್ರಿ.ಶ. ೧೮೮೧ |
| ೨. | ರಾಣಿಕೆರೆ | ಮೀರಾಸಾಬಿಹಳ್ಳಿ | ೫೮೨.೭೬ | ೨ | ಉತ್ತಮ | ಮಳೆ | ಕ್ರಿ.ಶ. ೧೯೦೭ |
| ೩. | ಸಾಣಿಕೆರೆ | ಸಾಣಿಕೆರೆ | ೧೦೪.೦೦ | ೨ | ಉತ್ತಮ | ಮಳೆ | ಚಿತ್ರದುರ್ಗ ಪಾಳೆಗಾರರು |
| ೪. | ಚಿಕ್ಕಮಧುರೆ ಕೆರೆ | ಚಿಕ್ಕಮಧುರೆ | ೧೪೯.೨೯ | ೨ | ಮಧ್ಯಮ | ಮಳೆ | ಕ್ರಿ.ಶ. ೮೧೫ |
| ೫. | ನಗರಂಕೆರೆ | ನಗರಂಗೆರೆ | ೧೧೬.೪೨ | ೨ | ಕನಿಷ್ಠ | ಮಳೆ | ಕ್ರಿ.ಶ. ೧೯೯೯ |
| ೬ | ದುಗ್ಗಮ್ಮನ ಕೆರೆ | ಗೊರ್ಲಕಟ್ಟೆ | ೯೦.೦೮ | ೨ | ಮಧ್ಯಮ | ಮಲೆ | ಕ್ರಿ.ಶ. ೧೮೯೯ |

## ವ್ಯಕ್ತಿವಿವರ

| ಕ್ರ.ಸಂ. | ವ್ಯಕ್ತಿ ಹೆಸರು | ವಯಸ್ಸು | ವೃತ್ತಿ | ಸ್ಥಳ |
|---|---|---|---|---|
| ೧. | ರಾಜಣ್ಣ | ೪೬ | ಗ್ರಾಮಪಂಚಾಯಿತಿ ಸದಸ್ಯ | ದೇವರಮರಿಕುಂಟೆ |
| ೨. | ಗಂಗಮ್ಮ | ೪೭ | ಗ್ರಾಮಪಂಚಾಯಿತಿ ಸದಸ್ಯ | ಕಸ್ತೂರಿತಿಮ್ಮನಹಳ್ಳಿ |
| ೩. | ಮಹೇಶ್ | ೨೩ | ಕೃಷಿಕ | ಕಸ್ತೂರಿತಿಮ್ಮನಹಳ್ಳಿ |
| ೪. | ಜಗದೀಶ್ | ೨೬ | ಕೃಷಿಕ | ಗಂಜಿಗುಂಟೆ |
| ೫. | ವಿಶ್ವನಾಥ | ೨೩ | ವಿದ್ಯಾರ್ಥಿ | ಸೋಮಗುದ್ದು |
| ೬ | ರಾಜು | ೨೬ | ವಿದ್ಯಾರ್ಥಿ | ಚಿಕ್ಕಮಧುರೆ |
| ೭ | ಚಂದ್ರಪ್ಪ | ೫೨ | ಕೂಲಿ | ದೊಡ್ಡೇರಿ |
| ೮. | ಈರಣ್ಣ | ೫೭ | ಪುರಸಭಾ ಮಾಜಿ ಸದಸ್ಯರು | ಚಳ್ಳಕೆರೆ |
| ೯. | ಶ್ರೀಕಾಂತ | ೫೨ | ಶಿಕ್ಷಕರು | ಚಳ್ಳಕೆರೆ |
| ೧೦. | ಜಂಪ್ಪಣ್ಣ | ೫೩ | ಶಿಕ್ಷಕರು | ಚಳ್ಳಕೆರೆ |
| ೧೧. | ತಿಪ್ಪೇಸ್ವಾಮಿ | ೫೮ | ಸಾಹಿತಿ | ದೇವರಮರಿಕುಂಟೆ |
| ೧೨. | ಚಿತ್ತಯ್ಯ | ೪೭ | ಪ್ರಾಧ್ಯಾಪಕರು | ಉಪ್ಪಾರಗಟ್ಟಿ |
| ೧೩. | ಚಂದ್ರಪ್ಪ | ೪೬ | ಕೂಲಿ | ಜಡೇಕುಂಟೆ |
| ೧೪. | ದ್ಯಾಮಣ್ಣ | ೪೭ | ಕೂಲಿ | ಕುರಡಿಹಳ್ಳಿ |
| ೧೫. | ನಾಗರಾಜ | ೪೬ | ಕೂಲಿ | ಬೊಂಬೇರಹಳ್ಳಿ |
| ೧೬. | ದೇವರಾಜ | ೪೫ | ಕೂಲಿ | ವಡೇರಹಳ್ಳಿ |
| ೧೭. | ತಿಪ್ಪೇಸ್ವಾಮಿ | ೪೨ | ಕೂಲಿ | ಸಾಣೀಕೆರೆ |
| ೧೮. | ಸಾವಿತ್ರಿ | ೪೨ | ಶಿಕ್ಷಕಿ | ಮೀರಾಸಾಬಿಹಳ್ಳಿ |
| ೧೯. | ಕವಿತ | ೪೩ | ಪ್ರಾಧ್ಯಾಪಕರು | ಚಳ್ಳಕೆರೆ |
| ೨೦. | ತಿಪ್ಪೇಸ್ವಾಮಿ | ೬೨ | ಶಿಕ್ಷಕ | ವಿಡುಪನಹಳ್ಳಿ |
| ೨೧. | ಜಯಣ್ಣ | ೬೩ | ಅರ್ಚಕರು | ಕಸ್ತೂರಿತಿಮ್ಮನಹಳ್ಳಿ |
| ೨೨. | ಕೃಷ್ಣಪ್ಪ | ೬೨ | ಊರಿನ ಗೌಡ | ಭರಮಸಾಗರ |

## ಕರ್ನಾಟಕ ನಕ್ಷೆ



# ಚಿತ್ರದುರ್ಗ ನಕ್ಷೆ

ಚಳ್ಳಕೆರೆ



ಚಳ್ಳಕೆರೆ ನಕ್ಷೆ

ಕಸಬಾ ಹೋಬಳಿ



ಸೋಮೇಶ್ವರ ದೇವಸ್ಥಾನದ ಗರ್ಭಗುಡಿ



ಚಂದ್ರಗಿರಿಯಮ್ಮನ ಹೊಂಡ ಸೋಮಗುದ್ದಿ



ಚಳ್ಳಕೇರಮ್ಮನ ದೇವಸ್ಥಾನ ಚಳ್ಳಕೆರೆ

ಕಟ್ಟೆಮಾರಕ್ಕನ ದೇವಸ್ಥಾನ ನಲ್ಲೂರಹಳ್ಳಿ



ರಾಣಿಕೆರೆ ಕಾಲುವೆ



ಬಯಲುಆಂಜನೆಯ ದೇವಸ್ಥಾನ ಮೀರಾಸಾಬಿಹಳ್ಳಿ

ಸೋಮೇಶ್ವರ ದೇವಸ್ಥಾನ ಸೋಮಗುದ್ದಿ

